E16

ಶ್ರೀ ಜಾನಕೀಜಾನಯೇ ನಮಃ.

ಟೀಕಾ ತಾತ್ಪರ್ಯಸಹಿತವಾದ

# ಭರ್ತೃಹರಿಯಲ್ಲಿನ

## ಶೃಂಗಾರ ಶತಕವು.

---

### ೧ನೇ ಭಾಗ.

---

ಶ್ಲೋ॥ ಏಕಂವಸ್ತುದ್ವಿಧಾಕರ್ತುಂಬಹವಸ್ಸಂತಿಧನ್ವಿನಃ ।
ದ್ವಯೋರೈಕ್ಯಂವಿಧಾತಾಯಃನಮಸ್ತಸ್ಮೈಶಧನ್ವಿನೇ ॥

ಶ್ಲೋ॥ ಶಂಭುಸ್ವಯಂಭುಹರಯೋಹರಿಣೇಕ್ಷಣಾ ನಾಮ್ಯೇನಾಕ್ರಿಯಂತ
ಸತತಂಗೃಹಕುಂಭದಾಸಾಃ ॥ ವಾಚಾಮಗೋಚರಚರಿತ್ರವಿಚಿತ್ರ
ತಾಯತಸ್ಮೈನಮೋಭಗವತೇಮಕರಧ್ವಜಾಯ ॥೧॥

ಟೀ॥ ಯೇನ=ಯಾವ ಮನ್ಮಥನಿಂದ, ಶಂಭುಸ್ವಯಂಭುಹರಯಃ=ಶಂಕರ ಚತುರ್ಮುಖ ನಾರಾಯಣರೂ, ಹರಿಣೇಕ್ಷಣಾನಾಂ=ಹುಲ್ಲೆಯ ಕಣ್ಣಿನಂತೆ ಕಣ್ಣುಳ್ಳ ಪಾರ್ವತಿ ಸರಸ್ವತಿ ಲಕ್ಷ್ಮಿಯರಿಗೆ, ಸತತಂ=ಯಾವಾಗಲು, ಗೃಹ=ಮನೆಯಲ್ಲಿ, ಕುಂಭದಾಸಾಃ=ಜಲಕುಂಭವಾಹಕ ಭೃತ್ಯರಾಗಿ, ಅಕ್ರಿಯಂತ=ಮಾಡಲ್ಪಟ್ಟರೋ, ವಾಚಾಂ=ಮಾತುಗಳಿಗೆ, ಅಗೋಚರ=ಅವಿಷಯವಾದ, ಚರಿತ್ರ=ಮಾಹಾತ್ಮ್ಯದಿಂದ. ವಿಚಿತ್ರತಾಯ=ಆಶ್ಚರ್ಯವುಳ್ಳವನಾಗಿ ಮಾಡಲ್ಪಟ್ಟ, ತಸ್ಮೈ=ಆ, ಭಗವತೇ=ಪೂಜ್ಯನಾದ. ಮಕರಧ್ವಜಾಯ=ಮನ್ಮಥನಿಗೆ. ನಮಃ=ನಮಸ್ಕಾರವು. ॥೧॥

ತಾ॥ ಯಾವ ಮನ್ಮಥನು ತನ್ನ ಮಹಿಮೆಯಿಂದ ಸೃಷ್ಟಿಸ್ಥಿತಿಸಂಹಾರಕಾರಿಗಳಾದ, ಬ್ರಹ್ಮ ವಿಷ್ಣು ಮಹೇಶರನ್ನು, ಶಾರದೇಂದಿರಾ ಶಂಕರಿಯರ ಮನೆಗಳಲ್ಲಿ ನೀರನ್ನು ಹೊರುವ ದಾಸರನ್ನಾಗಿ (ಎಂದರೆ ಅಧೀನರನ್ನಾಗಿ) ಮಾಡಿದನೋ, ಆದುದರಿಂದಲೇ ಅಂಥ ಅವಾಙ್ಮಾನಸ ಗೋಚರವಾದ ಚರಿತ್ರೆಯಿಂದ ಆಶ್ಚರ್ಯಕರನಾಗಿರುವ ಸಾಕ್ಷಾತ್ ಶ್ರೀ ಕೃಷ್ಣಸ್ವರೂಪನಾದ ಮನ್ಮಥನಿಗೆ ನಮಸ್ಕರಿಸುವೆನೆಂಬಾಶಯವು. ॥೧॥

ಶ್ಲೋ॥ ಸ್ಮಿತೇನಭಾವೇನಚಲಜ್ಜಯಾಭಿಯಾ ಪರಾಙ್ಮುಖೈರರ್ಧಕಟಾಕ್ಷ
ವೀಕ್ಷಣೈಃ ॥ ವಚೋಭಿರೀರ್ಷ್ಯಾಕಲಹೇನಲೀಲಯಾಸಮಸ್ತಭಾ
ವೈಃಖಲುಬಂಧನಂಸ್ತ್ರಿಯಃ .... ॥೧॥

ಟೀ॥ ಪ್ರಥಮ ಶ್ಲೋಕದಿಂದ ಮಂಗಳವನ್ನು ಮಾಡಿ ತರುವಾಯ ಸ್ತ್ರೀ ಪ್ರಶಂಸೆಯನ್ನು ಮಾಡಲುದ್ಯುಕ್ತನಾಗಿ ಮೊದಲು ಕಾಮಿನಿಯರೇ ಸಂಸಾರಬಂಧ ಕಾರಣವೆಂಬರ್ಥವನ್ನು ವಿಶದಪಡಿಸುತ್ತಾನೆ—ಸ್ಮಿತೇನ=ಮಂದಹಾಸದಿಂದ, ಭಾವೇನ=ಚಿತ್ತ ವಿಕಾರಾದಿ ಚೇಷ್ಟಾವಿಶೇಷದಿಂದ, ಲಜ್ಜಯಾ=ಅವಯವಗಳನ್ನು ಮರೆ ಮಾಡಿಕೊಳ್ಳುವ ಮನಸ್ಸಂಕೋಚರೂಪವಾದ ನಾಚಿಕೆಯಿಂದ, ಭಿಯಾ=ಆಕಸ್ಮಿಕವಾದ ಭಯದಿಂದ, ಪರಾಙ್ಮುಖೈಃ=ನಾಚಿಕೆಯಿಂದ ಹಿಂತಿರುಗಿದ, ಅರ್ಧಕಟಾಕ್ಷವೀಕ್ಷಣೈಃ=ಅಸಮಗ್ರವಾದ ಕಡೆಗಣ್ಣ ನೋಟಗಳಿಂದ, ವಚೋಭಿಃ=ಶುಕ ಕೋಕಿಲಗಳಂತೆ ಮಧುರವಾದ ಮಾತುಗಳಿಂದ, ಈರ್ಷ್ಯಾಕಲಹೇನ=ಅಸೂಯೆಯಿಂದುಂಟಾದ ಪ್ರಣಯ ಕಲಹದಿಂದ, ಲೀಲಯಾ=ವಿಲಾಸದಿಂದ, ಸಮಸ್ತಭಾವೈಃ=ಸಾತ್ವಿಕಸಂಚಾರ ಮೊದಲಾದ ಭಾವಗಳಿಂದಲೂ, ಸ್ತ್ರಿಯಃ=ಕಾಮಿನಿಯರು, ಬಂಧನಂ=ಸಂಸಾರಬಂಧ ಕಾರಣಭೂತರು, ಖಲು=ನಿಶ್ಚಯವು. .... ॥೧॥

ತಾ॥ ವಿಚಿತ್ರವಾದ ಹುಸಿನಗೆ, ವಿಲಕ್ಷಣವಾಗಿ ಚಿತ್ತವಿಕಾರಗಳಿಂದ ಅಂಗಚೇಷ್ಟೆಗಳು, ಅಂಗಗಳನ್ನಾಚ್ಛಾದನ ಮಾಡಿಕೊಳ್ಳುವ ಸಮಯದೊಳುಂಟಾಗುವ ವಿಜಾತೀಯವಾದ ನಾಚಿಕೆ, ಲಜ್ಜೆಯಿಂದ ಹಿಂತಿರುಗಿಸುವ ಕಡೆಗಣ್ಣು ನೋಟಗಳು, ಇಂಪಾದ ನುಡಿಗಳು, ಅಮೋಘವಾದ ವಿಲಾಸಗಳು, ಅನ್ಯಾದೃಶವಾದ ಅಸೂಯೆಯು, ಪ್ರಣಯಕಲಹವು, ಎಂಬಿಷ್ಟು ವಿಧವಾದ ಸಹಾಯ ಸಾಮಗ್ರಿಗಳಿರುವದರಿಂದಲೇ ನಾರಿಯರು ನರರ ಸಂಸಾರ ಬಂಧನಕ್ಕೆ ಮೂಲಕಾರಣರೆಂದರಿಯತಕ್ಕದ್ದು. .... ॥೧॥

ಶ್ಲೋ॥ ಭ್ರೂಚಾತುರ್ಯಾತ್ಕುಂಚಿತಾಕ್ಷಾಃಕಟಾಕ್ಷಾಃಸ್ನಿಗ್ಧಾವಾಚೋಲಜ್ಜಿ
ತಾಂತಾಶ್ಚಹಾಸಾಃ ॥ ಲೀಲಾಮಂದಂಪ್ರಸ್ಥಿತಂಚಸ್ಥಿತಂಚಸ್ತ್ರೀಣಾ
ಮೇತದ್ಭೂಷಣಂಚಾಯುಧಂಚ .... ॥೨॥

ಟೀ॥ ಹೇಳಿದರ್ಥವನ್ನು ಬೇರೆವಿಧದಿಂದ ಹೇಳುತ್ತಾನೆ—ಭ್ರೂಚಾತುರ್ಯಾತ್=ಕಣ್ಣುಹುಬ್ಬುಗಳ ವೈಚಿತ್ರ್ಯದ ದೆಸೆಯಿಂದ, ಕುಂಚಿತಾಕ್ಷಾಃ=ಕೊಣಿಸುವ ಕಣ್ಣುಳ್ಳ, ಕಟಾಕ್ಷಾಃ=ಕಡೆಗಣ್ಣನೋಟಗಳು, ಸ್ನಿಗ್ಧಾಃ=ಸ್ನೇಹದಿಂದಕೂಡಿರುವ, ವಾಚಃ=ನುಡಿಗಳು, ಲಜ್ಜಿತಾಂತಾಃ=ನಾಚಿಕೆಯೇ ಕಡೆಯಲ್ಲಿಉಳ್ಳ, ಹಾಸಾಶ್ಚ=ಮಂದಹಾಸಗಳು, ಲೀಲಾಮಂದಂ=ವಿಲಾಸದಿಂದ ಸುಂದರವಾದ, ಪ್ರಸ್ಥಿತಂಚ=ಮಂದಯಾ

ಣವು, ಸ್ಥಿತಂಚ=ನಿಲ್ಲುವಿಕೆಯು, ಏತತ್=ಈ ಸಮಸ್ತವು, ಸ್ತ್ರೀಣಾಂ=ಸುಂದರಿಯರಿಗೆ, ಭೂಷಣಂಚ=ಅಲಂಕಾರವು, ಆಯುಧಂಚ=ಅಸ್ತ್ರವು. .... ॥೩॥

ತಾ॥ ಹುಬ್ಬುಗಳನ್ನು ಮತ್ತು ಕಣ್ಣುಗಳನ್ನು ತಿರಿಗಿಸುವ ಚಾತುರ್ಯ, ಸುಂದರವಾದ ಕಡೆಗಣ್ಣು ನೋಟಗಳು, ಸ್ನೇಹದಿಂದ ಕೂಡಿರುವ ಕಿವಿಗಿಂಪಾದ ಮಾತುಗಳು, ನಾಚಿಕೆಯೇ ಮುಂದಾಗಿರುವ ಮಂದಹಾಸಗಳು, ಹಾಗೆಯೆ ವಿಚಿತ್ರವಾದ ವಿಲಾಸಗಳಿಂದ ಸುಂದರವಾದ ಮಂದಗಮನವು, ಚಮತ್ಕಾರವಾಗಿ ನಿಂತುಕೊಳ್ಳೋಣವು ಎಂಬಿವು ಅಂಗನೆಯರಿಗೆ ಅಮೋಘವಾದ ಅಲಂಕಾರಗಳಾಗಿಯೂ ಆಯುಧಗಳಾಗಿಯೂ ಇರುವವೆಂದರಿಯುವುದು. .... .... .... ॥೩॥

ಶ್ಲೋ॥ ಕ್ವಚಿತ್ಸಭ್ರೂಭಂಗೈಃಕ್ವಚಿದಪಿಚ ಲಜ್ಜಾಪರಿಗತೈಃಕ್ವಚಿದ್ಭೂರಿ
ತ್ರಸ್ತೈಃಕ್ವಚಿದಪಿಚಲೀಲಾವಿಲಸಿತೈಃ ॥ ಕುಮಾರೀಣಾಮೇತೈ
ರ್ಮದನಸುಭಗೈರ್ನೇತ್ರವಲಿತೈಃಸ್ಫುರನ್ನೀಲಾಬ್ಜಾನಾಂಪ್ರಕರಪ
ರಿಕೀರ್ಣಾಇವದಿಶಃ .... .... ॥೪॥

ಟೀ॥ ವಿಚಿತ್ರವಾದ ವಿಲಾಸಗಳನ್ನು ವರ್ಣಿಸುತ್ತಾನೆ—ಕ್ವಚಿತ್=ಒಂದು ಸ್ಥಳದಲ್ಲಿ, ಸಭ್ರೂಭಂಗೈಃ=ಕಣ್ಣುಹುಬ್ಬುಗಳ ಚಲನೆಗಳಿಂದ ಸಹಿತವಾದ, ಕ್ವಚಿದಪಿಚ=ಮತ್ತೊಂದು ಸ್ಥಳದಲ್ಲಿ, ಲಜ್ಜಾ=ನಾಚಿಕೆಯಿಂದ, ಪರಿಗತೈಃ=ವ್ಯಾಪ್ತವಾದ, ಅಥವಾ ಸ್ವಾನುಕೂಲ್ಯಪ್ರಕಾಶಕಗಳಾದ, ಕ್ವಚಿತ್=ಮತ್ತೊಂದು ಸ್ಥಳದಲ್ಲಿ, ಭೂರಿತ್ರಸ್ತೈಃ=ವಿಶೇಷವಾಗಿ ಭ್ರಾಂತಗಳಾದ, ಕ್ವಚಿದಪಿಚ=ಇನ್ನೊಂದೆಡೆಯೊಳು, ಲೀಲಾವಿಲಸಿತೈಃ=ವಿಲಾಸಗಳಿಂದ ಮನೋಹರಗಳಾದ, ಮದನ=ಮನ್ಮಥನಿಂದ, ಸುಭಗೈಃ=ಕೋಮಲಗಳಾದ, ಏತೈಃ=ಈ ಪ್ರಕಾರವಾದ, ಕುಮಾರೀಣಾಂ=ತರುಣಿಯರ, ನೇತ್ರವಳಿತೈಃ=ಕಟಾಕ್ಷಪ್ರಸರಣ ಪ್ರಕಾರಗಳಿಂದ, ದಿಶಃ=ದಿಕ್ಕುಗಳು, ಸ್ಫುರತ್=ಹೊಳೆಯುವ, ನೀಲಾಬ್ಜಾನಾಂ=ನೀಲೋತ್ಪಲಗಳ, ಪ್ರಕರ=ಸಮೂಹಗಳಿಂದ, ಪರಿಕೀರ್ಣಾಇವ=ಎರಚಲ್ಪಟ್ಟಂತಿರುವುವು. ... ॥೪॥

ತಾ॥ ವಿರಕ್ತರಿಗೂ ಚಿತ್ತಚಾಂಚಲ್ಯವನ್ನುಂಟುಮಾಡುವ ಉತ್ಪಲಾಕ್ಷಿಯರಾದ ತರುಣಿಯರ ಕಟಾಕ್ಷಪಾತಗಳು, ಒಂದೆಡೆಯೊಳು ಕಣ್ಣುಹುಬ್ಬುಗಳ ಚಲನ ಚಾತುರ್ಯದಿಂದ ಕೂಡಿ, ಮತ್ತೊಂದೆಡೆಯೊಳು ಸ್ವಾನುಕೂಲ್ಯ ಪ್ರಕಾಶಕವಾಗಿ, ಇನ್ನೊಂದುದಿಕ್ಕಿನಲ್ಲಿ ಆಕಸ್ಮಾತ್ತಾದ ಭಯದಿಂದ ಕೂಡಿದವುಗಳಾಗಿ, ಮತ್ತೊಂದು ಸ್ಥಲದಲ್ಲಿ ವಿಚಿತ್ರ ವಿಲಾಸಗಳಿಂದ ಹೊಳೆಯುತ್ತಲೂ ಇರುವದರಿಂದ ಎಲ್ಲಾದಿಕ್ಕುಗಳಲ್ಲಿಯೂ ನೀಲಕಮಲಗಳನ್ನು ಚೆ

ಥವಾ ಕನ್ನೈದಿಲೆಯ ಕುಸುಮಗಳನ್ನು ಎರಚಿರುವಂತಿರುವವೆಂದಾಶ ಯವು. .... .... .... ॥೪॥

ಶ್ಲೋ॥ ವಕ್ತ್ರಂಚಂದ್ರವಿಕಾಸಿಪಂಕಜಪರೀಹಾಸಕ್ಷಮೇಲೋಚನೇವರ್ಣ ಸ್ಸ್ವರ್ಣಮಪಾಕರಿಷ್ಣುರಳಿನೀಜಿಷ್ಣುಃಕಚಾನಾಂಚಯಃ ॥ ವ ಕ್ಷೋಜಾವಿಭಕುಂಭವಿಭ್ರಮಹರೌಗುರ್ವೀನಿತಂಬಸ್ಥಲೀವಾಚಾಂ ಹಾರಿಚಮಾರ್ದವಂಯುವತಿಷುಸ್ವಾಭಾವಿಕಂಮಂಡನಂ ॥೫॥

ಟೀ॥ ಅಂಗನೆಯರಿಗೆ ಸ್ವಾಭಾವಿಕವಾದ ಅಲಂಕಾರವನ್ನು ಹೇಳುತ್ತಾನೆ— ಚಂದ್ರವಿಕಾಸಿ=ಚಂದ್ರನಂತೆ ಸುಂದರವಾದ, ವಕ್ತ್ರಂ=ಮುಖವು, ಪಂಕಜ=ಕಮ ಲಗಳನ್ನು, ಪರೀಹಾಸ=ಹಾಸ್ಯಮಾಡುವದರಲ್ಲಿ, ಕ್ಷಮೆ=ಶಕ್ತವಾದ, ಲೋಚನೆ= ಕಣ್ಣುಗಳು, ಸ್ವರ್ಣಂ=ಭಂಗಾರವನ್ನು, ಅಪಾಕರಿಷ್ಣುಃ=ತಿರಸ್ಕರಿಸುವ, ವರ್ಣಃ= ಶರೀರಕಾಂತಿಯು, ಅಲಿನೀಜಿಷ್ಣುಃ=ಭ್ರಮರಗಳನ್ನು ಜಯಿಸುವ, ಕಚಾನಾಂ= ಕೂದಲುಗಳ, ಚಯಃ=ಸಮುದಾಯವು, ಇಭ=ಆನೆಯ, ಕುಂಭ=ಕುಂಭಸ್ಥಲದ, ವಿಭ್ರಮ=ವಿಲಾಸವನ್ನು, ಹರೌ=ಅಪಹಾರ ಮಾಡುವ, ವಕ್ಷೋಜೌ=ಕುಚಗಳು, ಗುರ್ವೀ=ದೊಡ್ಡದಾದ, ನಿತಂಬಸ್ಥಲೀ=ಕಟಿಪಶ್ಚಾದ್ಭಾಗವು. ಹಾರಿ=ಮನೋಹರ ವಾದ, ವಾಚಾಂ=ಮಾತುಗಳ, ಮಾರ್ದವಂಚ=ಮಾಧುರ್ಯವು, ಏತತ್=ಈ ಸಮ ಸ್ತವು, ಯುವತಿಷು=ತರುಣಿಯರಲ್ಲಿ, ಸ್ವಾಭಾವಿಕಂ=ಸ್ವಭಾವಸಿದ್ಧವಾದ, ಮಂ ಡನಂ=ಅಲಂಕಾರವು. ... ... ॥೫॥

ತಾ॥ ಪೂರ್ಣಚಂದ್ರನಂತೆ ಹೊಳೆಯುವ ಮುಖ, ಕಮಲದಳ ಗಳಂತೆಸೆವ ಕಣ್ಣುಗಳು, ಸುವರ್ಣದಂತೆ ರಮಣೀಯವಾದ ವರ್ಣ, ನೈಲ್ಯದಿಂದ ದುಂಬೆಗಳಂತೆ ಬೆಳಗುವ ಕಚಭಾರ, ಕರಿವರ ಶಿರಸ್ಸಿನಂ ತೆಸೆವ ಕುಚಗಳು, ಗುರುವಾಗಿರುವ ಕಟಿಪಶ್ಚಾದ್ಭಾಗ, ಇಂಪಾದ ವಾ ಙ್ಮಾಧುರ್ಯ, ಇವೆಲ್ಲವೂ ಸುಂದರಿಯರಿಗೆ ನೈಜವಾದ ಅಲಂಕಾರವೆಂದರಿ ವುದು. .... .... .... ॥೫॥

ಶ್ಲೋ॥ ಸ್ಮಿತಂಕಿಂಚಿನ್ಮುಗ್ಧಂಸರಳತರಳೋದೃಷ್ಟಿವಿಭವಃ ಪರಿಸ್ಪಂದೋ ವಾಚಾಮಭಿನವವಿಲಾಸೋಕ್ತಿಸರಸಃ ॥ ಗತಾನಾಮಾರಂಭಃಕಿಸಲ ಯಿತಲೀಲಾಪರಿಕರಸ್ಸ್ಪೃಶಂತ್ಯಾಸ್ತಾರುಣ್ಯಂಕಿಮಿವನಹಿರಮ್ಯಂ ಮೃಗದೃಶಃ .... .... .... ॥೬॥

ಟೀ॥ ಸ್ಮಿತಂ=ಮಂದಹಾಸವು, ಕಿಂಚಿತ್=ಸ್ವಲ್ಪವಾಗಿ, ಮುಗ್ಧಂ=ಸುಂದ

ರಮಣೀಯವಾದದ್ದು, ದೃಷ್ಟಿವಿಭವಃ=ನೋಟದ ಸಂಪತ್ತು, ಸರಳ=ವಕ್ರವಿಲ್ಲದಂತೆ, ತರಳಃ=ಚಂಚಲವಾದದ್ದು, ವಾಚಾಂಪರಿಸ್ಪಂದಃ=ವಾಗ್ವ್ಯಾಪಾರವು, ಅಭಿನವ=ನೂತನವಾದ, ವಿಲಾಸ=ವಿಭ್ರಮಗಳುಳ್ಳ, ಉಕ್ತಿ=ನುಡಿಗಳಿಂದ, ಮಧುರಃ=ರಮಣೀಯವಾದದ್ದು, ಗತಾನಾಂ=ಗಮನಗಳ, ಆರಂಭಃ=ಉಪಕ್ರಮವು, ಕಿಸಲಯಿತ=ಚಿಗುರಿಸಲ್ಪಟ್ಟ, ಲೀಲಾಪರಿಕರಃ=ವಿಲಾಸಸಮೃದ್ಧಿಯು, ತಾರುಣ್ಯಂ=ಪ್ರಾಯವನ್ನು, ಸ್ಪೃಶಂತ್ಯಾಃ=ಸ್ಪರ್ಶಮಾಡುವ, ಮೃಗದೃಶಃ=ಹರಿಣಾಕ್ಷಿಯಾದ ತರುಣಿಯ ಸಂಬಂಧವಾದ, ಕಿಮಿವ=ಯಾವ ವ್ಯಾಪಾರವುತಾನೆ, ನಹಿರಮ್ಯಂ=ಮನೋಹರವಾಗಿರುವದಿಲ್ಲವು, ... ... ॥ ೬ ॥

ತಾ॥ ಸುಂದರವಾದ ಮಂದಹಾಸ, ರಮಣೀಯವಾದ ಕಡೆಗಣ್ಣು ನೋಟದಸಂಪತ್ತು, ಮೃದುವಾಗಿಯೂ, ಇಂಪಾಗಿಯೂ ಇರುವ ನುಡಿಗಳ ಮಾಧುರ್ಯ, ಅಂದವಾದ ಮಂದಯಾನ, ಈ ಮೇರಿಗೆಲ್ಲಾ ಇರುವ ಕಳೆದುಳಿದ ರನ್ನೆಯರ ಯಾವ ವಿಲಾಸಗಳು ರಮಣೀಯಗಳಾಗಿರುವದಿಲ್ಲವು ? ಎಂದರೆ ಸಕಲವೂ ಸುಂದರಗಳೆಂಬ ತಾತ್ಪರ್ಯವು .... ॥ ೬ ॥

ಶ್ಲೋ॥ ದ್ರಷ್ಟವ್ಯೇಷುಕಿಮುತ್ತಮಂಮೃಗದೃಶಃಪ್ರೇಮಪ್ರಸನ್ನಂಮು
ಖಂಘ್ರಾತವ್ಯೇಷ್ವಪಿಕಿಂತದಾಸ್ಯಪವನಃಶ್ರಾವ್ಯೇಷುಕಿಂತದ್ವಚಃ॥
ಕಿಂಸ್ವಾದ್ಯೇಷು ತದೋಷ್ಠಪಲ್ಲವರಸಃ ಸ್ಪೃಶ್ಯೇಷುಕಿಂತದ್ವಪು
ರ್ಧ್ಯೇಯಂಕಿಂನವಯೌವನಂಸಹೃದಯೈಸ್ಸರ್ವತ್ರತದ್ವಿಭ್ರಮಾಃ॥

ಟೀ॥ ಇಂದ್ರಿಯಗಳ ಪ್ರವೃತ್ತಿಗೆ ಮುಖ್ಯವಿಷಯಗಳು ಅಂಗನೆಯರ ಅವಯವಾದಿಗಳೇ ಎಂಬರ್ಥವನ್ನು ಹೇಳುತ್ತಾನೆ—ದ್ರಷ್ಟವ್ಯೇಷು=ದರ್ಶನೀಯ ವಸ್ತುಗಳಲ್ಲಿ, ಉತ್ತಮಂ=ಶ್ಲಾಘ್ಯವಾದ ವಸ್ತು, ಕಿಂ=ಏನು, ಪ್ರೇಮಪ್ರಸನ್ನಂ=ಅನುರಾಗದಿಂದ ಅರಳಿದ, ಮೃಗದೃಶಃ=ಹರಿಣಲೋಚನೆಯಾಧ ತರುಣಿಯ, ಮುಖಂ=ವದನವು, ಘ್ರಾತವ್ಯೇಷ್ವಪಿ=ವಾಸನೆ ನೋಡತಕ್ಕ ವಸ್ತುಗಳಲ್ಲಿಯೂ, ಉತ್ತಮಂ=ಯೋಗ್ಯವಾದದ್ದು, ಕಿಂ=ಯಾವದು, ತತ್= ಆ ತರುಣಿಯ,ಆಸ್ಯಪವನಂ=ಮುಖಮಾರುತವು, ಶ್ರಾವ್ಯೇಷು=ಕೇಳಲು ಯೋಗ್ಯವಾದವುಗಳಲ್ಲಿ, ಉತ್ತಮಂ=ಶ್ರೇಷ್ಠವಾದದ್ದು, ಕಿಂ=ಏನು? ತತ್=ಆತರುಣಿಯ, ವಚಃ=ಮಾತು, ಸ್ವಾದ್ಯೇಷು=ರುಚಿನೋಡತಕ್ಕವುಗಳಲ್ಲಿ, ಉತ್ತಮಂ=ಯೋಗ್ಯವಾದದ್ದು, ಕಿಂ=ಯಾವದು? ತತ್=ಆ ತರುಣಿಯ, ಓಷ್ಠಪಲ್ಲವ=ಚಿಗುರಿನಂತಿರುವ ತುಟಿಯ, ರಸಃ=ಅಮೃತವು, ಸ್ಪೃಶ್ಯೇಷು=ಮುಟ್ಟಿನೋಡತಕ್ಕ ವಸ್ತುಗಳಲ್ಲಿ, ಉತ್ತಮಂ=ಉಚಿತವಾದದ್ದು, ಕಿಂ=ಏನು? ತದ್ವಪುಃ=ಆ ತರುಣಿಯ ಶರೀರವು, ಧ್ಯೇಯಂ=ಧ್ಯಾನಯೋಗ್ಯವಾದದ್ದು, ಕಿಂ=ಯಾವದು? ನವಯೌವನಂ=ಹೊಸದಾದ ಪ್ರಾಯವು, ಸಹೃದಯೈಃ=

ರಸಿಕ ಜನರಿಂದ. ಸರ್ವತ್ರ=ಎಲ್ಲಾದೇಶದಲ್ಲಿ ಅಥವಾ ಎಲ್ಲಾ ಸಮಯದಲ್ಲಿ, ತದ್ವಿಭ್ರಮಾಃ=ಆ ತರುಣಿಯ ವಿಲಾಸಗಳು, ಧ್ಯೇಯಾಃ=ಧ್ಯಾನಾರ್ಹಗಳು. ॥೩॥

ತಾ॥ ನೋಡತಕ್ಕ ಸುಂದರವಸ್ತುಗಳಲ್ಲಿ ಅನುರಾಗದಿಂದ ಅರಳಿದಂತೆ ಹೊಳೆವ ತರುಣಿಯ ಮುಖವು ಕಮನೀಯವಲ್ಲದೆ ಮತ್ತೊಂದೂ ನೇತ್ರಾನಂದಕರವಲ್ಲ. ಹಾಗೆಯೇ ವಾಸನೆ ನೋಡತಕ್ಕ ವಸ್ತುಗಳಲ್ಲಿ ಕಮಲದಂತೆ ಗಂಧವುಳ್ಳ ಪದ್ಮಿನೀಜಾತ್ಯಂಗನೆಯ ಮುಖಮಾರುತವೇ ಶ್ರೇಷ್ಠವಾದದ್ದು; ಕಿವಿಗಳಿಂದ ಕೇಳತಕ್ಕದ್ದರಲ್ಲಿ ಕಿವಿಕಿಂಪಾಗಿರುವ ಆ ಕಾಮಿನಿಯ ಮೃದುಮಧುರವಾದ ನುಡಿಯಲ್ಲದೆ ಮತ್ತೊಂದೂ ಉಚಿತವಲ್ಲವು. ಆಸ್ವಾದನ ಮಾಡತಕ್ಕದ್ದರಲ್ಲಿ ತರುಣಿಯ ಪಲ್ಲವದಂತಿರುವ ಅಧರದ ಅಮೃತರಸವಲ್ಲದೆ ಮತ್ತೊಂದಿಲ್ಲ, ಮುಟ್ಟತಕ್ಕದ್ದಕ್ಕೆ ಯೋಗ್ಯವಾದದ್ದು ತರುಣಿಯ ಕೋಮಲವಾದ ಅಂಗಗಳೇ. ಧ್ಯಾನಾರ್ಹವಾದದ್ದು ತರುಣಿಯ ನವಯೌವನವೇ. ಮತ್ತು ರಸಿಕಜನರಿಂದ ಸರ್ವದಾ ಧ್ಯೇಯವಾದವುಗಳು ಕಾಮಿನಿಯರ ವಿಲಾಸಗಳೇ ಅಲ್ಲದೆ ಇನ್ನಾವದೂ ಇಲ್ಲವೆಂದಾಶಯವು ..... .... ॥೩॥

ಶ್ಲೋ॥ ಏತಾಶ್ಚಲದ್ವಲಯಸಂಹತಿಮೇಖಲೋತ್ಥಝುಂಕಾರನೂಪುರಪರಾ
ಜಿತರಾಜಹಂಸ್ಯಃ ॥ ಕುರ್ವಂತಿಕಸ್ಯನಮನೋವಿವಶಂತರುಣ್ಯೋ
ವಿತ್ರಸ್ತಮುಗ್ಧಹರಿಣೀಸದೃಶೈಃಕಟಾಕ್ಷೈಃ .... ॥೪॥

ಟೀ॥ ಸಕಲರನ್ನೂ ಸಮ್ಮೋಹಗೊಳಿಸುವಿಕೆ ಎಂಬ ಧರ್ಮ ಇವರಿಗುಂಟೆಂಬದನ್ನು ವಿಶದಮಾಡುತ್ತಾನೆ....ಚಲತ್=ಚಲಿಸುತ್ತಿರುವ, ವಲಯಸಂಹತಿ=ಕಂಕಣಶ್ರೇಣಿಯು, ಮೇಖಲ=ಡಾಬಿನಲ್ಲಿರುವ ಗೆಜ್ಜೆಗಳು ಇವುಗಳ ದೆಸೆಯಿಂದ, ಉತ್ಥ=ಹುಟ್ಟಿದ, ಝುಂಕಾರ=ಝುಂಝುಣ ಶಬ್ದದಿಂದ, ನೂಪುರ=ಕಾಲುಕಡಗಗಳ ಶಬ್ದದಿಂದಲೂ, ಪರಾಜಿತ=ಪರಾಜಯ ಹೊಂದಿಸಲ್ಪಟ್ಟ, ರಾಜಹಂಸ್ಯಃ=ರಾಜಹಂಸಾಂಗನೆಯರುಳ್ಳ, ಏತಾಃ=ಈ ಪೂರ್ವೋಕ್ತರಾದ, ತರುಣ್ಯಃ=ಯುವತಿಯರು, ವಿತ್ರಸ್ತ=ಭಯಪಟ್ಟ, ಮುಗ್ಧ=ಸುಂದರವಾದ, ಹರಿಣೀ=ಹೆಣ್ಣು ಜಿಂಕೆಗಳಿಗೆ, ಸದೃಶೈಃ=ಸಮಾನವಾದ, ಕಟಾಕ್ಷೈಃ=ಕಡೆಗಣ್ಣು ನೋಟಗಳಿಂದ, ಕಸ್ಯ=ಯಾವ ಪುರುಷನ, ಮನಃ=ಚಿತ್ತವನ್ನು, ವಿವಶಂ=ಮೋಹಿತವನ್ನಾಗಿ, ನಕುರ್ವಂತಿ=ಮಾಡುವದಿಲ್ಲವು! ... ... ... ॥೪॥

ತಾ॥ ಕಾಲುಕಡಗಗಳ ಝೇಂಕಾರದಿಂದಲೂ, ಡಾಬಿನ ಗೆಜ್ಜೆಗಳ

ಕಿಂಕಿಣಿ ಧ್ವನಿಯಿಂದಲೂ, ಕೈಕಡಗಗಳ ಝಣತ್ಕಾರ ಶಬ್ದದಿಂದಲೂ, ಅವ್ಯಕ್ತಮಧುರವಾದ ಕಾಲುಕಡಗಗಳ ನಿನಾದದಿಂದಲೂ, ಮಂದಗಮನದಿಂದಲೂ, ವಿರಾಜಮಾನಗಳಾದ ರಾಜಹಂಸಿಗಳಂತೆ ರಮಣೀಯರಾಗಿರುವ ಮೇಲೆ ಹೇಳಿದ ತರುಣಿಯರು ಕಡೆಗಣ್ಣು ನೋಟಗಳ ಚಾತುರ್ಯದಿಂದ ವಿರಕ್ತನ ಮನಸ್ಸನ್ನೂ ಸೂರೆಗೊಂಬರೆಂಬ ಭಾವವು .... ॥೮॥

ಶ್ಲೋ॥ ಕುಂಕುಮಪಂಕಕಳಂಕಿತ ದೇಹಾಗೌರಪಯೋಧರಕಂಪಿತಹಾ
ರಾ॥ನೂಪುರಹಂಸರಣತ್ಪದಪದ್ಮಾ ಕಂನವಶೀಕುರುತೆಭುವಿರಾಮಾ

ಟೀ॥ ಕುಂಕುಮ=ಕೇಸರಿಯು ಅಥವಾ ಕುಂಕುಮದ, ಪಂಕ=ಕೆಸರಿನಿಂದ, ಕಳಂಕಿತ=ಗುರುತಾಗಿ ಮಾಡಲ್ಪಟ್ಟ, ದೇಹಾ=ಶರೀರವುಳ್ಳ, ಗೌರ=ಹೊಂಬಣ್ಣವಾದ, ಪಯೋಧರ=ಸ್ತನಗಳಲ್ಲಿ, ಕಂಪಿತ=ಚಲಿಸಲ್ಪಟ್ಟ, ಹಾರಾ=ಮುತ್ತಿನಹಾರವುಳ್ಳ ನೂಪುರಹಂಸ=ಹಂಸಗಳಂತಿರುವ ಕಾಲುಕಡಗಗಳಿಂದ, ರಣತ್=ಧ್ವನಿಮಾಡುವ, ಪದಪದ್ಮಾ=ಪಾದಕಮಲವುಳ್ಳ, ರಾಮಾ=ರಮಣಿಯು, ಭುವಿ=ಭೂಲೋಕದಲ್ಲಿ, ಕಂ=ಯಾವ ಪುರುಷನನ್ನು, ನವಶೀಕುರುತೆ=ಸ್ವಾಧೀನಪಡಿಸಿಕೊಳ್ಳುವದಿಲ್ಲ? ॥೯॥

ತಾ॥ ಕುಂಕುಮಕೇಸರಾನುಲೇಪದಿಂದಲೂ, ಹೊಂಬಣ್ಣವಾದ ಸ್ತನಗಳಲ್ಲಿ ಅತ್ತಿತ್ತಲುಳ್ಳಾಡುತಿರುವ ಮುತ್ತಿನ ಹಾರದಿಂದಲೂ, ಹಂಸಗಳಂತೆ ಕಿವಿಗಿಂಪಾಗಿ ಧ್ವನಿಗೈಯುವ ಪಾದಕಟಕಗಳಿಂದಲೂ, ಲೋಕೋತ್ತರ ಲಾವಣ್ಯವುಳ್ಳ ಲಲನೆಯು ವಿರಕ್ತಪುರುಷನನ್ನೂ ಸ್ವಾಧೀನಪಡಿಸಿಕೊಳ್ಳುವಳೆಂದು ಭಾವವು. .... .... ॥೯॥

ಶ್ಲೋ॥ ನೂನಂಹಿತೇಕವಿವರಾವಿಪರೀತವಾಚೋಯೇನಿತ್ಯಮಾಹುರಬಲಾ
ಇತಿಕಾಮಿನೀಸ್ತಾಃ ॥ಯಾಭಿರ್ವಿಲೋಲತರತಾರಕದೃಷ್ಟಿಪಾತೈ
ಶ್ಶಕ್ರಾದಯೋಽಪಿವಿಜಿತಾಸ್ತ್ವಬಲಾಃಕಥಂತಾಃ ॥೧೦॥

ಟೀ॥ ಸುಂದರಿಯರ ಸಾಮರ್ಥ್ಯವನ್ನು ವರ್ಣಿಸುತ್ತಾನೆ—ತೇ=ಆ ಪ್ರಸಿದ್ಧರಾದ, ಕವಿವರಾಃ=ಕವೀಶ್ವರರು, ವಿಪರೀತವಾಚಃ=ವ್ಯತ್ಯಸ್ತವಾದ ವಚನವುಳ್ಳವರು, ನೂನಂಹಿ=ಸತ್ಯವೆ, ಯೇ=ಯಾವ ಕವೀಶ್ವರರು, ತಾಃ=ಪ್ರಸಿದ್ಧರಾದ, ಕಾಮಿನೀಃ=ಲಲನೆಯರನ್ನು, ಅಬಲಾಃ=ದುರ್ಬಲರನ್ನಾಗಿ, ನಿತ್ಯಂ=ಯಾವಾಗಲು, ಆಹುಃ=ಹೇಳುವರೋ, ಯಾಭಿಃ=ಯಾವ ಕಾಮಿನಿಯರಿಂದ, ವಿಲೋಲತರ=ಅತ್ಯಂತ ಚಂಚಲಗಳಾದ, ದೃಷ್ಟಿ=ಕಟಾಕ್ಷಗಳ, ಪಾತೈಃ=ಪ್ರಸರಣಗಳಿಂದಲೇ, ಶಕ್ರಾದಯೋಽಪಿ=ಇಂದ್ರಾದಿಗಳೂ, ವಿಜಿತಾಃ=ಜಯಿಸಲ್ಪಟ್ಟರೊ, ತಾಸ್ತು=ಅವರಾದರೆ, ದುರ್ಬಲಾಃ=ಹೀನಬಲರು, ಕಥಂ=ಹೇಗೆ? ... — ॥೧೦॥

ತಾ॥ ಕೃಶಾಂಗಿಯರಾಗಿದ್ದರೂ, ಅಂಗನೆಯರ ಕಟಾಕ್ಷದ ಸರಣಿ ಮಾತ್ರದಿಂದಲೆ ಇಂದ್ರಾದಿ ಮಹಾಶೂರರೂ ಪರಾಜಿತರಾಗಿರುವಲ್ಲಿ, ಅಂಥಾ ಲಲನೆಯರು ಪ್ರಬಲೆಯರಲ್ಲದೆ ಅಬಲೆಯರು ಹೇಗೆ ಆದಾರು ? ಮತ್ತು ಯಾವಾಗಲೂ ಅವರನ್ನು ಅಬಲೆಯರೆಂದು ಹೇಳುವ ಕವೀಶ್ವರರು ಸುಳ್ಳು ಮಾತನ್ನು ಹೇಳತಕ್ಕವರಲ್ಲವೆ ? ಈ ವಿಷಯದಲ್ಲಿ ಸಂದೇಹವೇ ಇಲ್ಲವೆಂದಾಶಯವು. .... .... .... ॥೧೧॥

ಶ್ಲೋ॥ ನೂನಮಾಜ್ಞಾಕರಸ್ತಸ್ಯಾಸ್ಸುಭ್ರುವೋಮಕರಧ್ವಜಃ ॥ ಯತ
ಸ್ತನ್ನೇತ್ರಸಂಚಾರಸೂಚಿತೇಷುಪ್ರವರ್ತತೇ .... ॥೧೧॥

ಟೀ॥ ಕಾಮನು ಕಾಮಿನಿಯರಿಗೆ ಕಿಂಕರನೆಂಬದನ್ನು ಹೇಳುತ್ತಾನೆ—ಮಕರಧ್ವಜಃ=ಮನ್ಮಥನೂ, ತಸ್ಯಾಃ=ಪ್ರಸಿದ್ಧಳಾದ, ಸುಭ್ರುವಃ=ಕಾಮಿನಿಯು, ಆಜ್ಞಾಕರಃ=ಸೇವಕನು, ನೂನರ=ನಿಶ್ಚಯವು. ಯತಃ=ಯಾವಕಾರಣದ ದೆಸೆಯಿಂದ, ತತ್=ಆ ಕಾಮಿನಿಯರ, ನೇತ್ರ=ಕಟಾಕ್ಷಗಳ, ಸಂಚಾರ=ಪ್ರಸರಣದಿಂದ, ಸೂಚಿತೇಷು=ಸಂಜ್ಞೆಮಾಡಲ್ಪಟ್ಟವರಲ್ಲಿ, ಪ್ರವರ್ತತೆ=ಪ್ರವರ್ತಿಸುವನೋ? ॥೧೧॥

ತಾ॥ ಯಾವ ಕಾಮಿನಿಯು ಯಾವ ಪುರುಷನಲ್ಲಿ ಕಟಾಕ್ಷ ವಿಕ್ಷೇಪವನ್ನು ಮಾಡುವಳೋ, ಆ ಕ್ಷಣವೇ ಮನ್ಮಥನು ಅವರನ್ನು ಹೊಡೆದು ಕೆಡಹಲು ಪ್ರಯತ್ನಿಸುವನು. ಆದಕಾರಣವೇ ಕಾಮನಾಕಾಮಿನಿಯರಿಗೆ ಅಜ್ಞಾವಿಧಾಯಕನಾದ ಕಿಂಕರನು ಜಗದ್ವಶೀಕರಣ ಸಮರ್ಥನಾದ ಈ ಮನ್ಮಥನೇ ಅವರಿಗೆ ಸೇವಕನಾಗಿರುವಲ್ಲಿ ಅವರಬಲೆಯವರು ಹೇಗೆ ? ಮತ್ತು ಅವರ ಸಾಮರ್ಥ್ಯವೆಷ್ಟರದು? .... .... ॥೧೧॥

ಶ್ಲೋ॥ ಕೇಶಾಸ್ಸಂಯಮಿನಃಶ್ರುತೇರಪಿಪರಂ ಪಾರಂಗತೇಲೋಚನೆಹ್ಯಂ
ತರ್ವಕ್ತ್ರಮಪಿಸ್ವಭಾವಶುಚಿಭಿಃಕೀರ್ಣಂದ್ವಿಜಾನಾಂಗಣೈಃ ॥
ಮುಕ್ತಾನಾಂಸತತಾಧಿವಾಸರುಚಿರೌ ವಕ್ಷೋಜಕುಂಭಾವಿಮಾವಿ
ತ್ಥಂತನ್ವಿವಪುಃಪ್ರಶಾಂತಮಪಿತೇರಾಗಂಕರೋತ್ಯೇವನಃ ॥೧೨॥

ಟೀ॥ ಶ್ಲೇಷಾರ್ಥ ಚಾತುರ್ಯದಿಂದ ಕಾಮಿನಿಯನ್ನು ಪ್ರಶಂಸಿಸುತ್ತಾನೆ—ಕೇಶಾಃ=ಕೂದಲುಗಳು, ಸಂಯಮಿನಃ=ಕೂಡಿರುವವು (ಗಂಟಾಗಿರುವವು) ನಿಯಮವುಳ್ಳವುಗಳು, ಲೋಚನೆಅಪಿ=ನೇತ್ರಗಳೂ, ಶ್ರುತೇಃ=ವೇದದ, ಕಿವಿಯ. ಪರಂ=ವಿಶೇಷವಾದ, ಪಾರಂ=ಕೊನೆಯನ್ನು, ಸವಿಾಪವನ್ನು. ಗತೆ=ಹೊಂದಿರುವವು, ಅಂತರ್ವಕ್ತ್ರಮಪಿ=ಬಾಯಿಯ ಒಳಭಾಗವೂ, ಸ್ವಭಾವಶುಚಿಭಿಃ=ಸ್ವತಶ್ಶುದ್ಧವಾ

ದ, ದ್ವಿಜಾನಾಂ=ಬ್ರಾಹ್ಮಣರ, ಹಲ್ಲುಗಳ, ಗಣೈಃ=ಸಮುದಾಯಗಳಿಂದ, ಕೀರ್ಣಂ=ವ್ಯಾಪ್ತವಾಗಿರುವದು, ಇಮೌ=ಈ, ವಕ್ಷೋಜಕುಂಭೌ=ಕುಚಕುಂಭಗಳು, ಮುಕ್ತಾನಾಂ=ಮುತ್ತಿನಹಾರಗಳ, (ಮುಕ್ತರ) ಸತತಾಧಿವಾಸ=ನಿರಂತರಾವಾಸದಿಂದ! ರುಚಿರೌ=ಸುಂದರವಾದವುಗಳು, ತನ್ವಿ=ಎಲೆ ಕೃಶಾಂಗಿಯೆ, ಇತ್ಥಂ=ಈ ಪ್ರಕಾರವಾಗಿ, ತೇ=ನಿನ್ನ, ವಪುಃ=ಶರೀರವು, ಪ್ರಶಾಂತಮಪಿ=ನಿರ್ಮಲವಾಗಿರುವದು, ವೈರಾಗ್ಯಸಂಪತ್ತಿನಿಂದ ಕೂಡಿರುವದಾದರೂ. ನಃ=ನಮಗೆ, ರಾಗಮೇವ=ಅನುರಾಗವನ್ನೇ, ಸಂಭೋಗಾಭಿಲಾಷೆಯನ್ನೇ, ಕರೋತಿ=ಮಾಡುತ್ತದೆ. ... ||೧೨||

ತಾ|| ಎಲೈ ಕೃಶಾಂಗಿಯೆ ! ಗುಂಪಾಗಿರುವ ನಿನ್ನ ತಲೆಯ ಕೂದಲುಗಳು, ಕರ್ಣಾಂತ ವಿಶ್ರಾಂತವಾದ ಲೋಚನಗಳು, ಕಾಂತವಾದದಂತಗಳಿಂದಂದವಾದ ವದನವು, ಮುಕ್ತಾಹಾರದಿಂದ ಶೋಭಿಸುವ ಕುಚಕುಂಭಗಳು, ಇವುಗಳೆಲ್ಲವೂ ಕೇವಲ ನಿರ್ಮಲವಾಗಿರುವದರಿಂದಲೆ ಅತ್ಯಂತಾನುರಾಗವನ್ನುಂಟುಮಾಡುವವು; ಮತ್ತು-ಎಲೆ ಕೃಶವಾದ ಅವಯವವುಳ್ಳ ಅಬಲೆಯೆ ! ಕೇಶಗಳು ನಿಯಮವ್ರತವುಳ್ಳವುಗಳು, ನಿನ್ನಯ ನೇತ್ರಗಳು ವೇದಪಾರವನ್ನು ಹೊಂದಿರುವವು, ನಿನ್ನ ವದನವೋ ಶುದ್ಧವಾದ ಬ್ರಾಹ್ಮಣರೊಡನೆ ಸೇರಿರುವದು ; ಕುಚಗಳು ಮುಕ್ತರೊಡನೆ ಕೂಡಿರುವವು, ಈರೀತಿಯೊಳು ನಿನ್ನ ಅವಯವಗಳೆಲ್ಲಾ ಕೇವಲ ವೈರಾಗ್ಯಭಾವದಿಂದ ಕೂಡಿದ್ದರೂ ನಮಗ ಸಂಭೋಗಾಭಿಲಾಷೆಯನ್ನೇ ಉಂಟುಮಾಡುವವೆಂತಲೂ ಭಾವವು.

ಶ್ಲೋ|| ಮುಗ್ಧೇಧಾನುಷ್ಕತಾಕೇಯಮಪೂರ್ವಾತ್ವಯಿದೃಶ್ಯತೆ || ಯ
ಯಾವಿಧ್ಯಸಿಚೇತಾಂಸಿಗುಣೈರೇವನಸಾಯಕೈಃ ||೧೩||

ಟೀ|| ಮುಗ್ಧೇ=ಎಲೆ ಸುಂದರಿ, ತ್ವಯಿ=ನಿನ್ನಲ್ಲಿ. ಅಪೂರ್ವೇ=ಪೂರ್ವದಲ್ಲಿ ಕಾಣದಿರುವ, ಧಾನುಷ್ಕತಾ=ಧನುರ್ಧರತ್ವವು, ದೃಶ್ಯತೆ=ಕಾಣಬರುವದು, ಇಯಂ=ಇದು, ಕಾ=ಎಂಥಾದ್ದು? ಯಯಾ=ಯಾವನಿನ್ನ ಧನುರ್ಧರತ್ವದಿಂದ, ಚೇತಾಂಸಿ=ಮನಸ್ಸುಗಳನ್ನು, ಗುಣೈರೇವ=ಮೌರ್ವೀಗಳಿಂದಲೇ, ರೂಪಯೌವನಾದಿ ಗುಣಗಳಿಂದಲೇ, ವಿಧ್ಯಸಿ=ಹೊಡೆಯುವಿ. ... ... ||೧೩||

ತಾ|| ಲೋಕದಲ್ಲಿ ಎಷ್ಟು ಚತುರನಾದ ಬಿಲ್ಲಾಳಾದರೂ ಕಣ್ಣಿಗೆ ಕಾಣಬರುವ ಗುರಿಯನ್ನು ಹೊಡೆಯುವದುಂಟು, ಎಲೆ ಕಾಮಿನಿ! ನೀನು ಮುಗ್ಧಳಾದಾಗ್ಯೂ ರೂಪ ಲಾವಣ್ಯಾದಿಗುಣಗಳಿಂದಲೆ ಸುತರಾಂ ಕಾಣಬರದಿರುವ ಪರರ ಮನಸ್ಸನ್ನು ಹೊಡೆಯು ಕೆಡಹುವಿಯಲ್ಲ, ಅಹಹ ! ಈ ನಿನ್ನ ಬಿಲ್ಲಾಳುತನವು ಎಷ್ಟು ಶ್ಲಾಘ್ಯವಾಗಿರುವದು! ಎಂದರೆ ಯುವತಿಯು

ರಿಗೆ ಪುರುಷರನ್ನು ಮೋಹಗೊಳಿಸಲು ರೂಪಲಾವಣ್ಯಗಳೇ ಆಯುಧಗಳೆಂದು ಭಾವವು. .... .... ॥೧೩॥

ಶ್ಲೋ॥ ಸತಿಪ್ರದೀಪೇಸತ್ಯಗ್ನೌಸತ್ಸುತಾರಾಮಣೀಂದುಷು ॥ ವಿನಾಮೇ
ಮೃಗಶಾಬಾಕ್ಷ್ಯಾತಮೋಭೂತಮಿದಂಜಗತ್ .... ॥೧೪॥

ಟೀ॥ ಇನ್ನು ಮೇಲೆ ಕಾಮಿನಿಯರ ವಿಷಯವಾಗಿ ಕಾಮುಕರ ತಾತ್ಪರ್ಯವನ್ನು ತಿಳಿಸುತ್ತಾನೆ—ಪ್ರದೀಪೇ=ಪದಾರ್ಥಗಳನ್ನು ತೋರಿಸುವ ದೀಪವು, ಸತಿ=ಇದ್ದಾಗ್ಯೂ, ಅಗ್ನೌ=ಸರ್ವಪ್ರಕಾಶವಾದ ಅಗ್ನಿಯು, ಸತ್ಯಪಿ=ಇದ್ದರೂ, ತಥಾ=ಹಾಗೆಯೇ, ತಾರಾಮಣೀಂದುಷು=ನಕ್ಷತ್ರ, ರತ್ನ, ಚಂದ್ರರು, ಸತ್ಸ್ವಪಿ=ಇದ್ದರೂ, ಮೃಗಶಾಬಾಕ್ಷ್ಯಾವಿನಾ=ಹರಿಣ ಶಿಶುಲೋಚನೆಯಾದ ಕಾಮಿನಿಯಿಂದಲ್ಲದೆ, ಇದಂ=ಈ, ಜಗತ್=ಪ್ರಪಂಚವು, ಮೇ=ನನಗೆ, ತಮೋಭೂತಂ=ಅಂಧಕಾರವಾಗಿರುವದು.

ತಾ॥ ಪದಾರ್ಥಗಳನ್ನು ತೋರ್ಪಡಿಸುವ ಸಾಮರ್ಥ್ಯವುಳ್ಳ ದೀಪ, ಅಗ್ನಿ, ನಕ್ಷತ್ರಗಳು, ದಿವ್ಯವಾದ ರತ್ನಗಳು, ಚಂದ್ರನು, ಇಷ್ಟು ವಸ್ತುಗಳಿದ್ದಾಗ್ಯೂ ಹುಲ್ಲೆಯ ಕರುವಿನಂತೆ ಕಣ್ಣುಳ್ಳ ಕಾಮಿನಿಯೊಬ್ಬಳಿಲ್ಲದೊಡೆ ಲೋಕವೇ ಕಾಣುವದಿಲ್ಲವು, ಎಂದರೆ ಕಾಮುಕನ ಪ್ರಾಣವು ಕಾಮಿನಿಯಿಂದಲೇ ಇರುವದೆಂದಾಶಯವು. .... ॥೧೪॥

ಶ್ಲೋ॥ ಉದ್ವೃತ್ತಸ್ತನಭಾರಏಷತರಳೇನೇತ್ರೇಚಲೇಭ್ರೂಲತೇರಾಗಾಧಿ
ಷ್ಠಿತಮೋಷ್ಠಪಲ್ಲವಮಿದಂಕುರ್ವಂತುನಾಮವ್ಯಥಾಂ ॥ ಸೌಭಾ
ಗ್ಯಾಕ್ಷರಮಾಲಿಕೇವಲಿಖಿತಾಪುಷ್ಪಾಯುಧೇನಸ್ವಯಂಮಧ್ಯಸ್ಥಾ
ಪಿಕರೋತಿತಾಪಮಧಿಕಾರೋಮಾವಳಿಃಕೇನವಾ ॥೧೫॥

ಟೀ॥ ಉದ್ವೃತ್ತಃ=ಅತ್ಯಂತ ಗುಂಡಾಗಿರುವ, ದುರ್ಮಾರ್ಗಿಯಾದ, ಏಷಃ=ಈ, ಸ್ತನಭಾರಃ=ಕುಚ ಕುಂಭಗಳು, ತರಳೆ=ಲೀಲಾವಿಲೋಲಗಳಾದ, ಚಪಲಗಳಾದ, ನೇತ್ರೇ=ಕಣ್ಣುಗಳು, ಚಲೇಚ=ವಿಲಾಸಾತಿಶಯದಿಂದ ಚಂಚಲವಾದವುಗಳು, ಸ್ಥೈರ್ಯಹೀನಗಳು. ಭ್ರೂಲತೇಚ=ಬಳ್ಳಿಯಂತಿರುವ ಕಣ್ಣು ಹುಬ್ಬುಗಳು. ರಾಗ=ಕೋಪದಿಂದ, ಮಾತ್ಸರ್ಯದಿಂದ, ಅಧಿಷ್ಠಿತಂ=ಆಶ್ರಯಿಸಲ್ಪಟ್ಟಿರುವದು, ಇದಂ=ಈ, ಓಷ್ಠಪಲ್ಲವಂ=ಚಿಗುರಿನಂತಿರುವ ತುಟಿಯೂ. ವ್ಯಥಾಂ=ಮನಃಖೇದವನ್ನು, ಕುರ್ವಂತುನಾಮ=ಮಾಡಲಿ, ಪುಷ್ಪಾಯುಧೇನ=ಕಾಮದೇವನಿಂದ, ಸ್ವಯಂ=ತನ್ನ ಕೈಯಿಂದ, ಲಿಖಿತಾ=ಬರೆಯಲ್ಪಟ್ಟ, ಸೌಭಾಗ್ಯ=ಸುಕೃತ ವಿಶೇಷ ಸೂಚಕವಾದ, ಅಕ್ಷರ=ವರ್ಣಗಳ, ಮಾಲಿಕೇವ=ಪಂಕ್ತಿಯಂತಿರುವ, ಮಧ್ಯಸ್ಥಾಪಿ=ಮಧ್ಯಪ್ರದೇಶದಲ್ಲಿರುವ, ತಟಸ್ಥವಾಗಿದ್ದರೂ, ರೋಮಾವಳಿಃ=ರೋಮಪಂಕ್ತಿಯು, ಕೇನವಾ=

ಯಾವಕಾರಣದಿಂದ, ಅಧಿಕಂ—ವಿಶೇಷವಾದ, ತಾಪಂ—ಸಂತಾಪವನ್ನು, ಕರೋತಿ—ಮಾಡುವದೊ ? ... ... ... ॥೧೪॥

ತಾ॥ ಅತ್ಯಂತ ವರ್ತುಲಾಕಾರವಾಗಿರುವ ಈ ಕುಚಕುಂಭಗಳು, ವಿಚಿತ್ರವಿಲಾಸಗಳಿಂದ ಚಂಚಲವಾದ ನಯನಗಳು, ಬಳ್ಳಿಗಳಂತೆ ಸುಂದರವಾದ ಕಣ್ಣು ಹುಬ್ಬುಗಳು, ಅತಿಶಯುವಾದ ಆರುಣ್ಯದಿಂದ ಕೂಡಿ ಚಿಗುರಿನಂತಿರುವ ಚೆಂದುಟಿಯು ಇವುಗಳು ಬಂದುವೇಳೆ ಮನಸ್ಸಿಗೆ ಸಂತಾಪವನ್ನು ಮಾಡಿದರೂ ಮಾಡಬಹುದು ; ಮನ್ಮಥನು ಸುಕೃತ ವಿಶೇಷವನ್ನು ಸೂಚಿಸುವಂತೆ ಸ್ವಹಸ್ತ ಲಿಖಿತವಾದ ಅಕ್ಷರ ಪಙ್ಕ್ತಿಯೋ ಎಂಬಂತಿರುವ ಈ ರೋಮರಾಜಿಯು ಕೇವಲ ಮಾಧ್ಯಸ್ಥ್ಯವನ್ನು ಹೊಂದಿದ್ದರೂ ಮನಸ್ಸಿಗೆ ವಿಶೇಷವಾಗಿ ವ್ಯಥೆಯನ್ನು ಯಾವ ಕಾರಣದಿಂದುಂಟುಮಾಡುವದೋ ತಿಳಿಯುವದಿಲ್ಲವು, ಎಂದರೆ ನಾಭಿಯಮೇಲಣ ರೋಮಪಂತಿಯು ಅತ್ಯಂತಾಹ್ಲಾದಕರವಾಗಿರುವದೆಂದು ತಾತ್ಪರ್ಯವು. .... ॥೧೪॥

ಶ್ಲೋ॥ ಮುಖೇನಚಂದ್ರಕಾಂತೇನಮಹಾನೀಲೈಶ್ಶಿರೋರುಹೈಃ ॥ ಕರಾಭ್ಯಾಂಪದ್ಮರಾಗಾಭ್ಯಾಂರೇಜೇರತ್ನಮಯೀವಸಾ ॥೧೫॥

ಟೀ॥ ಚಂದ್ರಕಾಂತೇನ—ಇಂದುವಿನಂತೆ ಸುಂದರವಾದ, ಚಂದ್ರಕಾಂತಮಣಿರೂಪವಾದ, ಮುಖೇನ—ಮುಖದಿಂದಲೂ, ಮಹಾನೀಲೈಃ—ಅತ್ಯಂತ ಕಪ್ಪಾಗಿರುವ, ಸಿಂಹಳದ್ವೀಪದಲ್ಲಿ ಹುಟ್ಟಿದ ಮಹಾ ನೀಲಮಣಿಗಳಿಂದಲೂ, ಪದ್ಮರಾಗಾಭ್ಯಾಂ—ಕಮಲದಂತೆ ಕೆಂಪಾದ ಪದ್ಮರಾಗ ಮಣಿಗಳಿಂದಲೂ, ಸಾ—ಆ ಸುಂದರಿಯು, ಮಣಿಮಯೀವ—ಶ್ರೇಷ್ಠವಾಗಿಯೂ, ರತ್ನಮಯವಾಗಿಯೂ, ರೇಜೇ—ಪ್ರಕಾಶಿಸುವಳು.

ತಾ॥ ಚಂದ್ರನಂತಿರುವ ಮುಖದಿಂದಲೂ, ಚಂದ್ರಕಾಂತಮಣಿಯಿಂದಲೂ, ಅತ್ಯಂತ ಕಪ್ಪಾಗಿರುವ ಮುಂಗುರುಳುಗಳಿಂದಲೂ, ಮಹಾ ನೀಲಮಣಿಗಳಿಂದಲೂ, ಕೆಂದಾವರೆಯಂತಿರುವ ಕರಗಳಿಂದಲೂ, ಪದ್ಮರಾಗರತ್ನಗಳಿಂದಲೂ, ಅಂಗನೆಯು ಸಾಕ್ಷಾತ್ ರತ್ನಸ್ವರೂಪವಾಗಿಯೇ ಇರುವಂತೆ ಹೊಳೆಯುವಳೆಂದಾಶಯವು. .... .... ॥೧೫॥

ಶ್ಲೋ॥ ಗುರುಣಾಸ್ತನಭಾರೇಣಮುಖಚಂದ್ರೇಣಭಾಸ್ವತಾ ॥ ಶನೈಶ್ಚರಾಭ್ಯಾಂಪಾದಾಭ್ಯಾಂರೇಜೇಗ್ರಹಮಯೀವಸಾ .... ॥೧೬॥

ಟೀ॥ ಗುರುಣಾ—ದಪ್ಪವಾದ, ಬೃಹಸ್ಪತಿಗ್ರಹಸ್ವರೂಪದಿಂದ, ಸ್ತನಭಾರೇಣ—ಕುಚಭಾರದಿಂದಲೂ, ಭಾಸ್ವತಾ—ಹೊಳೆವಸೂರ್ಯಗ್ರಹರೂಪದಿಂದಲೂ, ಮು

ಖಚಂದ್ರೇಣ=ಚಂದ್ರನಂತಿರುವ ಮುಖದಿಂದಲೂ, ಶನೈಶ್ಚರಾಭ್ಯಾಂ=ಮಂದಯಾನವುಳ್ಳ, ಶನೈಶ್ಚರರೆಂಬ ಗ್ರಹಗಳಿಂದಲೂ, ಸಾ=ಆ ಸುಂದರಿಯು, ಗ್ರಹಮಯೀವ=ಗ್ರಹಗಳ ಸ್ವರೂಪಳಾಗಿರುವಂತೆ, ರೇಜೇ=ಪ್ರಕಾಶಿಸುವಳು, .... ॥೧೭॥

ತಾ॥ ದಪ್ಪವಾಗಿರುವ ಕುಚಭಾರದಿಂದಲೂ, ಮತ್ತು ಚಂದ್ರನಂತಿರುವ ಮುಖದಿಂದಲೂ, ಗುರುಗ್ರಹದಿಂದಲೂ, ಮುಖವೆಂಬ ಚಂದ್ರಗ್ರಹದಿಂದಲೂ, ಮಂದಗಮನದಿಂದ ಶೋಭಿಸುವ ಪಾದಗಳಿಂದಲೂ, ಶನೈಶ್ಚರಗ್ರಹದಿಂದಲೂ, ಈ ಸುಂದರಿಯು ಗ್ರಹಸ್ವರೂಪವಾಗಿರುವಂತೆ ಹೊಳೆಯುತಲಿರುವಳೆಂದಾಶಯವು. .... .... ॥೧೭॥

ಶ್ಲೋ॥ ತಸ್ಯಾಸ್ಸ್ತನೌಯದಿಘನೌಜಘನಂಚ ಹಾರಿವಕ್ತ್ರಂಚಚಾರುತವ
ಚಿತ್ತ ಕಿಮಾಕುಲತ್ವಂ ॥ ಪುಣ್ಯಂಕುರುಷ್ವಯದಿತೇಷುತವಾಸ್ತಿ
ವಾಂಛಾಪುಣ್ಯೈರ್ವಿನಾನಹಿಭವಂತಿಸಮೀಹಿತಾರ್ಥಾಃ ॥೧೮॥

ಟೀ॥ ತಸ್ಯಾಃ=ಆ ತರುಣಿಯ, ಸ್ತನೌ=ಕುಚಗಳು, ಘನೌ=ನಿಬಿಡಗಳಾಗಿ ಇರುವವು, ಜಘನಂ=ಕಟಿ ಪುರೋಭಾಗವೂ, ಹಾರಿಚ=ಮನೋಹರವಾದದ್ದು, ವಕ್ತ್ರಂ=ಮುಖವು, ಚಾರು=ಸುಂದರವಾದದ್ದು, ಯದ್ಯಪಿ=ಆದಾಗ್ಯೂ, ಹೇಚಿತ್ತ=ಎಲೆ ಮನಸ್ಸೆ, ತವ=ನಿನಗೆ, ಆಕುಲತ್ವಂ=ಕಳವಳವು, (ಆಶೆಯು) ಕಿಂ=ಏತಕ್ಕೆ? ತೇಷು=ಆ ಸ್ತನಾದಿಗಳಲ್ಲಿ, ತವ=ನಿನಗೆ, ವಾಂಛಾ=ಸಂಭೋಗಾಭಿಲಾಷೆಯು, ಯದಿ=ಇದ್ದದ್ದೇ ಆದರೆ, ಪುಣ್ಯಂ=ಸುಕೃತವನ್ನು, ಕುರುಷ್ವ=ಮಾಡು, ಪುಣ್ಯೈರ್ವಿನಾ=ಸುಕೃತಗಳಿಂದಲ್ಲದೆ, ಸಮೀಹಿತಾರ್ಥಾಃ=ಇಷ್ಟಾರ್ಥಗಳು, ನಹಿಭವಂತಿ=ಉಂಟಾಗುವದಿಲ್ಲವು. .... ... .... ॥೧೮॥

ತಾ॥ ಕುಚಕುಂಭಗಳು ಕಮನೀಯಗಳಾಗಿರುವವು, ಮತ್ತು ಮಧ್ಯಪ್ರದೇಶ ಮೊದಲಾದದ್ದು ಮನೋಹರವಾಗಿರುವದು, ಮುಖವೂ ಸುಂದರವಾಗಿಯೇ ಇರುವದು, ಆದರೂ ಎಲೈ ಮನಸ್ಸೇ! ಅವುಗಳನ್ನು ನೋಡಿ ಆಶೆಯಿಂದ ಕಳವಳಪಡಬೇಡ, ಒಂದು ವೇಳೆ ಆಶೆಪಟ್ಟು ಅವುಗಳನ್ನು ಬಯಸುವಿಯಾದರೆ, ಜ್ಯೋತಿಷ್ಟೋಮಾದಿಗಳಿಂದುಂಟಾದ ಅಪೂರ್ವದಿಂದೊದಗುವ ರಂಭಾ ಸಂಭೋಗಾದಿಗಳಂತೆ ಅತಿಶಯವಾದ ಸುಕೃತದಿಂದಲೇ ಮೇಲೆ ಹೇಳಿದ ಕುಚಕುಂಭಾದಿ ಸಂಭೋಗವು ಸಂಭವಿಸುವದಲ್ಲದೆ, ಅನ್ಯಥಾ ಸಂಭವಿಸಲಾರದು, ಆದಕಾರಣದಿಂದಲೆ ಸುಕೃತವನ್ನು ಸಂಪಾದಿಸು.

ಶ್ಲೋ॥ ಇಮೇತಾರುಣ್ಯಶ್ರೀನವಪರಿಮಳಾಃ ಪ್ರೌಢಸುರತಪ್ರತಾಪಪ್ರಾರಂಭಾಸ್ಸ್ಮರವಿಜಯದಾನಪ್ರತಿಭುವಃ ॥ ಚಿರಂಚೇತಶ್ಚೋರಾ ಅಭಿನವವಿಕಾರೈಕಗುರವೋವಿಲಾಸವ್ಯಾಪಾರಾಃ ಕಿಮಪಿವಿಜಯಂತೇಮೃಗದೃಶಾಂ .... .... ॥೧೯॥

ಟೀ। ತಾರುಣ್ಯಶ್ರೀ=ಯೌವನಸಂಪತ್ತಿನ, ನವ=ಹೊಸದಾದ, ಪರಿಮಳಾಃ=ಸೌಭಾಗ್ಯವಿಶೇಷವುಳ್ಳ, ಪ್ರೌಢ=ಪ್ರಚಂಡವಾದ, ಸುರತ=ರತಿಯಲ್ಲಿನ, ಪ್ರತಾಪ=ಸಾಮರ್ಥ್ಯದ, ಪ್ರಾರಂಭಾಃ=ಉಪಕ್ರಮಗಳಾದ, ಸ್ಮರ=ಮನ್ಮಥನಿಗೆ, ವಿಜಯದಾನ=ಗೆದ್ದುಕೊಡುವದರಲ್ಲಿ. ಪ್ರತಿಭುವಃ=ಲಗ್ನಕಗಳಾದ, ಚಿರಂ=ಬಹುಕಾಲದಿಂದ, ಚೇತಶ್ಚೋರಾಃ=ಚಿತ್ತವನ್ನು ಕದಿಯುವ, ಅಭಿನವ=ಹೊಸದಾದ, ವಿಕಾರ=ಪ್ರಾಯವಿಕಾರದಲ್ಲಿ, ಏಕಗುರವಃ=ಮುಖ್ಯೋಪದೇಶಕಗಳಾದ, ಮೃಗದೃಶಾಂ=ಹರಿಣಾಕ್ಷಿಯರಾದ ರಮಣಿಯರ ಸಂಬಂಧವಾದ, ಇಮೇ=ಈ ಮೇಲೆ ಹೇಳಿದ, ವಿಲಾಸವ್ಯಾಪಾರಾಃ=ಶೃಂಗಾರಚೇಷ್ಟೆಗಳು, ಕಿಮಪಿ=ಹೇಳಲಶಕ್ಯವಾಗಿ, ವಿಜಯಂತೇ=ಸರ್ವೋತ್ಕೃಷ್ಟಗಳಾಗಿರುವವು. ... .... ॥೧೯॥

ತಾ॥ ನವಯೌವನದ ಪರಿಮಳ ಸಂಪತ್ತಿನಂತೆಯೂ, ಸರ್ವೋತ್ತಮವಾಗಿರುವ ಸುರತ ಸಾಮರ್ಥ್ಯದ ಪ್ರಾರಂಭಗಳಂತೆಯೂ, ಕಾಮುಕರನ್ನು ಗೆದ್ದು ಕಾಮನಿಗೆ ವಿಜಯವನ್ನುಂಟುಮಾಡುವದರಲ್ಲಿ ಹೊಣೆಯಾಗಿಯೂ, ವಿರಕ್ತರ ಚಿತ್ತಚೌರ್ಯವನ್ನು ಮಾಡುವವುಗಳಾಗಿಯೂ,ಪ್ರಾಯದೊಳುಂಟಾಗುವ ನಾನಾ ವಿಕಾರಗಳಿಗೆ ಉಪಾಧ್ಯಾಯರಂತೆಯೂ ಇರುವ ಹರಿಣನಯನೆಯರಾದ ತರುಣಿಯರ ವಿಚಿತ್ರವಾದ ವಿಲಾಸ ವಿಶೇಷಗಳು ಪರಮಾನಂದಕರಗಳಾಗಿರುವವೆಂದು ತಾತ್ಪರ್ಯವು. .... ॥೧೯॥

ಶ್ಲೋ॥ ಪ್ರಣಯಮಧುರಾಃಪ್ರೇಮೋದಾರಾರಸಾಶ್ರಯತಾಂಗತಾಃಭಣಿತಿಮಧುರಾಮುಗ್ಧಪ್ರಾಯಾಃಪ್ರಕಾಶಿತಸಮ್ಮದಾಃ॥ ಪ್ರಕೃತಿಸುಭಗಾವಿಸ್ರಂಭಾದ್ರಾಸ್ಸ್ಮರೋದಯದಾಯಿನೋರಹಸಿಕಿಮಪಿಸ್ವೈರಾಲಾಪಾಹರಂತಿಮೃಗೀದೃಶಾಂ .... ॥೨೦॥

ಟೀ॥ ಪ್ರಣಯ=ಸ್ನೇಹದಿಂದ, ಮಧುರಾಃ=ಸಂತಾಪಹರಗಳಾದ, ಪ್ರೇಮ=ಅನುರಾಗ ವಿಶೇಷದಿಂದ, ಉದಾರಾಃ=ಮನೋಹರಗಳಾದ, ರಸಾಶ್ರಯತಾಂ=ರಸಾಸ್ಪದತ್ವವನ್ನು, ಗತಾಃ=ಹೊಂದಿದ, ಭಣಿತಿ=ಸಂದರ್ಭ ವಿಶೇಷದಿಂದ, ಮಧುರಾಃ=ಇಂಪಾದ, ಮುಗ್ಧಪ್ರಾಯಾಃ=ಸುಕುಮಾರಿಗಳಿಂದ, ಅಮೃತಪ್ರಾಯಗಳಾದ, ಪ್ರಕಾಶಿತ=ವ್ಯಕ್ತವಾಡಲ್ಪಟ್ಟ, ಸಮ್ಮದಾಃ=ಸಂಭೋಗೌತ್ಸುಕ್ಯವುಳ್ಳ,

ಪ್ರಕೃತಿ=ಸ್ವಭಾವದಿಂದ, ಸುಭಗಾಃ=ಪ್ರೀತಿಪೂರ್ವಕಗಳಾದ, (ಮನೋಹರಗಳಾದ) ವಿಸ್ರಂಭಾದಾರ್ದ್ರಾಃ=ವಿಶ್ವಾಸ ಯುಕ್ತಗಳಾದ, ಸ್ಮರೋದಯದಾಯಿನಃ=ಮನ್ಮಥೋದ್ರೇಕವನ್ನುಂಟುಮಾಡುವ, ಮೃಗೀದೃಶಾಂ=ಕುರಂಗನಯನೆಯರ ಸಂಬಂಧವಾಗಿರುವ, ರಹಸಿ=ರಹಸ್ಯದಲ್ಲಿ, ಸ್ವೈರಾಲಾಪಾಃ=ಹಿತವಚನಗಳು, ಕಿಮಪಿ=ಅಪಾರವಾಗಿ, ಹರಂತಿ=ಮನೋಹರಗಳಾಗಿರುವವು. ... ||೨೦||

ತಾ|| ಅಂತರಂಗವನ್ನು ದ್ರವಿಸುವಂತೆ ಮಾಡುತ್ತ, ಸ್ನೇಹದಿಂದಸಂತಾಪಹರಗಳಾಗಿ, ಅನುರಾಗದಿಂದ ಗಂಭೀರಗಳಾಗಿ, ಶೃಂಗಾರಾದಿ ರಸಗಳಿಗೆ ಮುಖ್ಯಾಸ್ಪದಗಳೆಂದೆನಿಸಿ, ಆಯಾಯ ಸಂದರ್ಭ ವಿಶೇಷದಿಂದ ಇಂಪಾಗಿ, ಸೌಕುಮಾರ್ಯದಿಂದೊಡಗೂಡಿ, ಸಂಭೋಗದೊಳು ಕುತೂಹಲವನ್ನು ಸೂಚಿಸುತ, ಸ್ವಭಾವದಿಂದ ಸುಂದರಗಳಾಗಿ, ವಿಶ್ವಾಸ ಪರಿಪೂರ್ಣಗಳೆಂದೆನಿಸಿ, ಜಿತೇಂದ್ರಿಯನಿಗೂ ಮನ್ಮಥೋದ್ರೇಕವನ್ನುಂಟುಮಾಡುತ್ತಲೂ ಇರುವ ಹರಿಣನಯನೆಯರಾದ ರಮಣಿಯರ ರಹಸ್ಯದಲ್ಲಿನ ರುಚಿರವಾದ ವಚನಗಳು ಪೇಳಲಶಕ್ಯವಾದ ಆನಂದವನ್ನುಂಟುಮಾಡತಕ್ಕವುಗಳಾಗಿರುವವು. .... .... .... ||೨೦||

---

## ಸಂಭೋಗವರ್ಣನಾರಂಭವು.

ಶ್ಲೋ|| ವಿಶ್ರಮ್ಯವಿಶ್ರಮ್ಯವನದ್ರುಮಾಣಾಂಛಾಯಾಸುತನ್ವೀವಿಚಚಾರ
ಕಾಚಿತ್ || ಸ್ತನೋತ್ತರೀಯೇಣಕರೋದ್ಧೃತೇನನಿವಾರಯಂ
ತೀಶಶಿನೋಮಯೂಖಾನ್ .... .... ||೨೧||

ಟೀ|| ಸಂಯೋಗವಿಯೋಗಗಳನ್ನಾಶ್ರಯಿಸಿರುವ ಶೃಂಗಾರಗಳೊಳಗೆ ವಿರಹಶೃಂಗಾರವನ್ನು ವರ್ಣಿಸುತ್ತಾನೆ—ಕಾಚಿತ್—ಒಬ್ಬಾನೊಬ್ಬ, ತನ್ವೀ=ಕೃಶಾಂಗಿಯು, ವನದ್ರುಮಾಣಾಂ=ವನವೃಕ್ಷಗಳ, ಛಾಯಾಸು=ನೆರಳುಗಳಲ್ಲಿ, ವಿಶ್ರಮ್ಯ ವಿಶ್ರಮ್ಯ=ಪದೇಪದೇ ವಿಶ್ರಮಿಸಿಕೊಂಡು, ಕರೋದ್ಧೃತೇನ=ಕೈಯಿಂದ ಎತ್ತಲ್ಪಟ್ಟ, ಸ್ತನೋತ್ತರೀಯೇಣ=ಕುಚಕುಂಭಾಚ್ಛಾದನ ವಸ್ತ್ರದ ಸೆರಗಿನಿಂದ, ಶಶಿನಃ=ಚಂದ್ರನ, ಮಯೂಖಾನ್=ಕಿರಣಗಳನ್ನು, ನಿವಾರಯಂತೀ=ಹೋಗಲಾಡಿಸುವಳಾಗಿ ವಿಚಚಾರ=ತಿರುಗಿದಳು. .... ... .... ||೨೧||

ತಾ|| ಒಬ್ಬಾನೊಬ್ಬ ಕೃಶಾಂಗಿಯು ವಿರಹತಾಪವನ್ನು ಸಹಿಸಲಾರದೆ ಕಾಲವನ್ನು ಕಳೆಯಲು ವನಕ್ಕೆ ತೆರಳಿ, ಅಲ್ಲಿ ತನ್ನ ಕುಚಗಳಮೇಲೆ ಹೊದೆದಿರುವ ಮೇಲ್ಮುಸುಕಿನ ವಸ್ತ್ರದ ಕೊನೆಯಿಂದ ವಿರಹಿಗಳಗತ್ಯಂತ

ಸಂತಾಪಕರವಾದ ಚಂದ್ರಕಿರಣಗಳನ್ನು ಬೀಸಿ ಹೋಗಲಾಡಿಸುತ್ತ, ಮರಗಳ ನೆರಳಿನಲ್ಲಿ ಪದೇಪದೇ ವಿಶ್ರಮಿಸಿಕೊಳ್ಳುತ್ತಲೂ ಸಂಚಾರಮಾಡುತ್ತಿರುವಳೆಂದು ತಾತ್ಪರ್ಯವು. ಇಲ್ಲಿ ಹೇಳಲ್ಪಟ್ಟಿರುವ ನಾಯಕಿಯು ವಿರಹೋತ್ಕಂಠಿತೆಯು. .... .... ॥೨೧॥

ಶ್ಲೋ॥ ಅದರ್ಶನೇದರ್ಶನಮಾತ್ರಕಾಮಾದೃಷ್ಟ್ವಾಪರಿಷ್ವಂಗಸುಖೈಕಲೋಲಾ॥ ಆಲಿಂಗಿತಾಯಾಂಪುನರಾಯತಾಕ್ಷ್ಯಾಮಾಶಾಸ್ಮಹೇವಿಗ್ರಹಯೋರಭೇದಂ .... .... ॥೨೨॥

ಟೀ॥ ಯಾ=ಯಾವ ಆಯತಾಕ್ಷಿಯು, ಅದರ್ಶನೇ=ಪ್ರಿಯನ ದರ್ಶನವಿಲ್ಲದಿರುವಲ್ಲಿ, ದರ್ಶನಮಾತ್ರ=ನೋಡುವಿಕೆಯುಮಾತ್ರದಲ್ಲಿ, ಕಾಮಾ=ಅಪೇಕ್ಷೆಯುಳ್ಳವಳೊ, ದೃಷ್ಟ್ವಾ=ನೋಡಿ, ಪರಿಷ್ವಂಗ=ಆಲಿಂಗನದ, ಸುಖ=ಸುಖದಲ್ಲಿ, ಏಕ=ಮುಖ್ಯವಾಗಿ, ಲೋಲಾ=ಆಸಕ್ತಳಾಗಿರುವಳೊ, ತಸ್ಯಾಂ=ಆ, ಆಯತಾಕ್ಷ್ಯಾಂ=ವಿಶಾಲಾಕ್ಷಿಯು, ಆಲಿಂಗಿತಾಯಾಂ=ಆಲಿಂಗಿಸಲ್ಪಡುತ್ತಿರಲಾಗಿ, ವಿಗ್ರಹಯೋಃ=ಶರೀರಗಳ, ಐಕ್ಯಂ=ಅಭೇದವನ್ನು, ಆಶಾಸ್ಮಹೇ=ಕೋರುವೆವು, ॥೨೨॥

ತಾ॥ ವಲ್ಲಭನ ದರ್ಶನ ಉಂಟಾಗದಿರಲು ಅತಿ ಕುತೂಹಲದಿಂದ ನೋಡಿದರೆ ಸಾಕೆಂದು ಅಪೇಕ್ಷಿಸುತ್ತ, ಒಳಿಕ ನೋಡಲು ಆಲಿಂಗನ ಸುಖವನ್ನಪೇಕ್ಷಿಸುತ್ತ, ಅನಂತರ ಆಲಿಂಗನಮಾಡಲು, ಪರಸ್ಪರ ಶರೀರಗಳಿಗೆ ಭೇದವಿರುವದೆಂದು ತೋರದಿರುವ ವಿಶಾಲಾಕ್ಷಿಯಾದ ತರುಣಿಯು ಗಾಢಾಲಿಂಗನ ಸುಖವು ಬ್ರಹ್ಮಾನಂದಕ್ಕಿಂತಲೂ ಉತ್ತಮವಾಗಿರುವದರಿಂದ ಆ ಸುಖವನ್ನೇ ಕೋರುವೆವೆಂದು ತಾತ್ಪರ್ಯವು. .... ॥೨೨॥

ಶ್ಲೋ॥ ಮಾಲತೀಶಿರಸಿಜೃಂಭಣಾಂಮುಖೇಚಂದನಂವಪುಷಿಕುಂಕುಮಾವಿಲಾ। ವಕ್ಷಸಿಪ್ರಿಯತಮಾಮದಾಲಸಾಸ್ವರ್ಗಏಷಪರಿಶಿಷ್ಟಆಗಮಃ॥

ಟೀ॥ ಅಂಗನಾಲಿಂಗನ ಸುಖವು ಸ್ವರ್ಗಸುಖ ಸದೃಶವೆಂಬದನ್ನು ಸೂಚಿಸುತ್ತಾನೆ —ಶಿರಸಿ=ತಲೆಯಲ್ಲಿ, ಮಾಲತೀ=ಜಾಜಿಯಹೂವಿನ ಮಾಲೆಯು, ಮುಖೇ=ವದನದಲ್ಲಿ, ಜೃಂಭಣಾಂ=ಮದನವಿಕಾರದಿಂದುಂಟಾದ ವಿಕಾಸವು, ವಪುಷಿ=ಶರೀರದಲ್ಲಿ, ಕುಂಕುಮಾ=ಕುಂಕುಮಕೇಸರಿಯು, ಆವಿಲಂ=ಲೇಪನವು, ವಕ್ಷಸಿ=ಎದೆಯಲ್ಲಿ, ಮದಾಲಸಾ=ಮದದಿಂದ ಮತ್ತಳಾದ, ಪ್ರಿಯತಮಾ=ವಲ್ಲಭೆಯು, ಏಷಃ=ಈ ಸುಖಸಮುದಾಯವು, ಸ್ವರ್ಗಃ=ಸ್ವರ್ಗಶಬ್ದವಾಚ್ಯವು, ಆಗಮಃ=ಇದಕ್ಕಿಂತಲೂ ಬೇರಾದ ಸ್ವರ್ಗವನ್ನು ಹೇಳುವ ಶಾಸ್ತ್ರವು. ಪರಿಶಿಷ್ಟಃ=ಮುಖ್ಯವಾದದ್ದಲ್ಲವು. ॥೨೩॥

ತಾ॥ ಮನೋಹರವಾದ ಜಾಜಿಯುಹುವ್ವನ್ನು ಮುಡಿದು, ಸುರತೆ ಸುಖಾಸಕ್ತಿಸೂಚಕವಾದ ಮುಖವಿಲಾಸದಿಂದೊಡಗೂಡಿ, ಕುಂಕುಮಕೇಸರಾದಿ ದಿವ್ಯಚಂದನ ಲೇಪನದಿಂದ ಶೋಭಿಸುವ ಪ್ರಿಯತಮೆಯು ಗಾಢಾಲಿಂಗನ ಉಂಟಾಗಿರಲು ಇದೇ ಸ್ವರ್ಗವೆಂಬ ಪದಾರ್ಥವಲ್ಲದೆ ಬೇರೆ ಸ್ವರ್ಗವಿರುವದೆಂದು ಹೇಳುವ ಶಾಸ್ತ್ರವು ಅನೃತವೆಂದು ತಾತ್ಪರ್ಯವು. ॥೨೯॥

ಶ್ಲೋ॥ ಪ್ರಾಙ್ಮಾಮೇತಿಮನಾಗನಾಗತರಸಂಜಾತಾಭಿಲಾಷಂತತಸ್ಸವ್ರೀಡಂತದನುಶ್ಲಥೋದ್ಯಮಮಥಪ್ರಧ್ವಸ್ತಧೈರ್ಯಂಪುನಃ ॥ ಪ್ರೇಮಾರ್ದ್ರಂಸ್ಪೃಹಣೀಯ ನಿರ್ಭರರಹಃಕ್ರೀಡಾಪ್ರಗಲ್ಭಂ ತತೋನಿಸ್ಸಂಗಾಂಗವಿಕರ್ಷಣಾಧಿಕಸುಖಂರಮ್ಯಂಕುಲಸ್ತ್ರೀರತಂ ॥೨೪॥

ಟೀ॥ ಇನ್ನು ಅಂತವರ ಸಂಭೋಗವಂ ವರ್ಣಿಸಲುಪಕ್ರಮಿತ್ತಾನೆ—ಪ್ರಾಕ್=ಆರಂಭದಲ್ಲಿ, ಮಾಮೇತಿ=ಬೇಡ ಬೇಡವೆಂದು, ಮನಾಕ್=ಸ್ವಲ್ಪವಾಗಿ, ಅನಾಗತ=ಅನುತ್ಪನ್ನವಾದ, ರಸಂ=ಅನುರಾಗವುಳ್ಳ, ತತಃ=ನಿಷೇಧಾನಂತರದಲ್ಲಿ, ಜಾತ=ಉಂಟಾದ, ಅಭಿಲಾಷಂ=ಕುತೂಹಲವುಳ್ಳ, ತದನು=ಅಭಿಲಾಷಾನಂತರದಲ್ಲಿ, ಸವ್ರೀಡಂ=ನಾಚಿಕೆಯಿಂದೊಡಗೂಡಿದ, ಅಥ=ನಾಚಿಕೆಯ ಅನಂತರದಲ್ಲಿ, ಶ್ಲಥ=ಶಿಥಿಲವಾದ, ಉದ್ಯಮಂ=ನಿಷೇಧ ಪ್ರಯತ್ನವುಳ್ಳ, ಪುನಃ=ತರುವಾಯ, ಪ್ರಧ್ವಸ್ತ=ನಷ್ಟವಾದ, ಧೈರ್ಯಂ=ಧೈರ್ಯವುಳ್ಳ, ತತಃ=ಅನಂತರದಲ್ಲಿ. ಪ್ರೇಮ=ಪ್ರೀತಿಯಿಂದ, ಆರ್ದ್ರಂ=ನೆನೆದಂಥ, ತತಃ=ತರುವಾಯ, ಸ್ಪೃಹಣೀಯ=ಕೋರತಕ್ಕ, ನಿರ್ಭರ=ಮರ್ಯಾದಾತೀತವಾದ, ರಹಃಕ್ರೀಡಾ=ಏಕಾಂತವಿಹಾರಗಳಿಂದ, ಪ್ರಗಲ್ಭಂ=ಪ್ರೌಢವಾದ, ತತಃ=ಆಮೇಲೆ, ನಿಸ್ಸಂಗ=ಕಡೆಯಿಲ್ಲದಿರುವ, ಅಂಗವಿಕರ್ಷಣ=ಕುಚಾದ್ಯವಯವಮರ್ದನದಿಂದ, ಅಧಿಕ=ವಿಶೇಷವಾದ, ಸುಖಂ=ಆನಂದವುಳ್ಳ, ಕುಲಸ್ತ್ರೀರತಂ=ಸ್ವಸ್ತ್ರೀಸಂಭೋಗವು, ರಮ್ಯಂ=ಸುಂದರವಾದದ್ದು. ... ॥೨೪॥

ತಾ॥ ಮುಗ್ಧಳಾದ ಸ್ವಾಂಗನಾಪ್ರಥಮ ಸಂಭೋಗವೆಂಬುದು ಆದಿಭಾಗದೊಳು ಅನಾಸ್ವಾದಿತರಸ ವುಂಟಾಗಿರುವದರಿಂದ ಬೇಡಬೇಡವೆಂಬ ನಿಷೇಧ ವಚನವುಳ್ಳದ್ದಾಗಿ, ತರುವಾಯ ಕೊಂಚ ಅಭಿಲಾಷೆಯುಳ್ಳದ್ದಾಗಿಯೂ, ಬಳಿಕ ನಾಚಿಕೆಯಿಂದೊಡಗೂಡಿರುವದಾಗಿಯೂ, ಅನಂತರ ನಿಷೇಧದಲ್ಲಿ ಶಿಥಿಲವಾದ ಪ್ರಯತ್ನವುಳ್ಳದ್ದಾಗಿಯೂ, ಹಾಗೆಯೇವಕ್ರತೆಯಿಲ್ಲದಿರುವದಾಗಿಯೂ, ಆ ಮೇಲೆ ಪ್ರೇಮರಸ ಪರಿಪೂರಿತವಾಗಿಯೂ, ಆ ತರುವಾಯ ಪೇಳಲಶಕ್ಯವಾದ ಏಕಾಂತ ವಿಹಾರಗಳ ಪ್ರೌಢಿಮೆಯುಳ್ಳದ್ದಾಗಿಯೂ, ತದನಂತರದೊಳು ತಡೆಯಿಲ್ಲದ ಕುಚಕುಂಭಾದ್ಯಾಲಿಂಗನಾದಿ ವಿವಿಧ

ವಿಲಾಸಗಳಿಂದ ಪರಮಾನಂದವುಳ್ಳದ್ದಾಗಿಯೂ ಇರುವದರಿಂದಲೇ ಅತ್ಯಂತ ಮನೋಹರವಾದದ್ದೆಂದಾಶಯವು. .... ||೨೪||

ಶ್ಲೋ|| ಉರಸಿನಿಪತಿತಾನಾಂಸ್ರಸ್ತಧಮ್ಮಿಲ್ಲಕಾನಾಂ ಮುಕುಳಿತನಯನಾ
ನಾಂಕಿಂಚಿದುನ್ಮೀಲಿತಾನಾಂ || ಉಪರಿಸುರತಖೇದಸ್ವಿನ್ನಗಂಡಸ್ಥ
ಲಾನಾಮಧರಮಧುವಧೂನಾಂಭಾಗ್ಯವಂತಃಪಿಬಂತಿ ||೨೫||

ಟೀ|| ಸಂಭೋಗ ವಿಶೇಷಗಳಲ್ಲೊಂದು ಬಂಧವನ್ನು ವಿಶೇಷಿಸುತ್ತಾನೆ— ಉರಸಿ=ವಕ್ಷಸ್ಥಲದಲ್ಲಿ, ನಿಪತಿತಾನಾಂ=ಬಿದ್ದಿರುವ, ಸ್ರಸ್ತ=ಬಿಚ್ಚಿಹೋದ, ಧಮ್ಮಿಲ್ಲಕಾನಾಂ=ಕೂದಲುಗಳುಳ್ಳ, ಮುಕುಳಿತ=ಮುಚ್ಚಲ್ಪಟ್ಟ, ನಯನಾನಾಂ=ನೇತ್ರಗಳುಳ್ಳ, ಕಿಂಚಿತ್=ಕೊಂಚವಾಗಿ, ಉನ್ಮೀಲಿತಾನಾಂ=ತೆರೆಯುವಿಕೆಯುಳ್ಳ, ಉಪರಿಸುರತ=ಪುರುಷಾಯಿತದಿಂದುಂಟಾದ, ಖೇದ=ಶ್ರಮದಿಂದ, ಸ್ವಿನ್ನ=ಬೆವರ್ದ, ಗಂಡಸ್ಥಲಾನಾಂ=ಕಪೋಳಗಳುಳ್ಳ, ವಧೂನಾಂ=ಪ್ರಿಯತಮೆಯರಸಂಬಂಧವಾದ, ಅಧರ=ತುಟಿಯಲ್ಲಿರುವ, ಮಧು=ಮಧುರಸವನ್ನು, ಭಾಗ್ಯವಂತಃ=ಪುಣ್ಯಶಾಲಿಗಳು, ಪಿಬಂತಿ=ಪಾನಮಾಡುತ್ತಾರೆ, .... ... ||೨೫||

ತಾ|| ವಕ್ಷಸ್ಥಲದೊಳು ಮಲಗಿ ತಲೆಯು ಎಣೆಗಂಟು ಬಿಚ್ಚಿಹೋಗಿ ಕಣ್ಣು ಸ್ವಲ್ಪ ಮುಚ್ಚಿ ಮುಚ್ಚದ ಹಾಗಿರುತ್ತ, ಉಪರಿಸುರತದ ಆಯಾಸದಿಂದ ಬೆವರಿದ ಕಪೋಲಗಳುಳ್ಳ ಸರ್ವಾಂಗ ಸುಂದರಿಯರ ಅಧರಾಮೃತವನ್ನು ಪಾನಮಾಡುವವರು ಭಾಗ್ಯವಂತರಾದ ಪುರುಷರಲ್ಲವೆ ? ಸಾಮಾನ್ಯರಿಗೆ ಸರ್ವಥಾ ಸಂಭವಿಸುವದಿಲ್ಲವು — .... ||೨೫||

ಶ್ಲೋ|| ಆಮೀಲಿತನಯನಾನಾಂಯಸ್ಸುರತರಸೋನುಸಂವಿದಂಭಾತಿ | ಮಿ
ಥುನೈರ್ಮಿಥೋವಧಾರಿತಮವಿತಥಮಿದಮೇವಕಾಮನಿರ್ವಹಣಂ ||

ಟೀ|| ಆಮೀಲಿತನಯನಾನಾಂ=ಸ್ವಲ್ಪವಾಗಿ ಮುಚ್ಚಲ್ಪಟ್ಟ ಕಣ್ಣುಗಳುಳ್ಳ ಕಾಮಿನಿಯರ, ಯಃ=ಯಾವ, ಸುರತರಸಃ=ಸಂಭೋಗಾಸ್ವಾದವು, ಸಂವಿದಂ=ತಿಳುವಳಿಕೆಯನ್ನು, ಅನು=ಅನುಸರಿಸಿ, ಭಾತಿ=ಪ್ರಕಾಶಿಸುವದೋ, ಮಿಥುನೈಃ=ರಸಜ್ಞರಾದ ಸ್ತ್ರೀಪುರುಷರಿಂದ, ಮಿಥಃ=ಪರಸ್ಪರವಾಗಿ, ಅವಧಾರಿತಂ=ತಿಳಿಯಲ್ಪಡುವ, ಇದಮೇವ=ಇದೇ, ಕಾಮ=ಕಾಮಪುರುಷಾರ್ಥದ, ನಿರ್ವಹಣಂ=ಪ್ರತಿಷ್ಠೆಯು. ... .... .... ||೨೬||

ತಾ|| ಸಂಭೋಗಕಾಲದೊಳು ಸುಖಪಾರವಶ್ಯದಿಂದ ಸ್ವಲ್ಪವಾಗಿ ಮುಚ್ಚಲ್ಪಟ್ಟ ನಯನಗಳುಳ್ಳ ಕಾಮಿನಿಯರ ಸುರತ ಸ್ವಾರಸ್ಯಸಂಬಧ್ಧ

ಇದು ಇಂಥಾದ್ದೆಂಬದಾಗಿ ಆ ಸ್ತ್ರೀಪುರುಷರಿಬ್ಬರೂ ಪರಸ್ಪರವಾಗಿ ತಿಳಿದು ಅನುಭವಿಸಿದರೆ ಅದೇ ಸಾರ್ಥಕವಾದ ಕಾಮಪುರುಷಾರ್ಥವಲ್ಲದೆ ಅಜ್ಞಾ ಭಾವದಿಂದನುಭವಿಸುವಿಕೆಯೆಂಬುದು ಕೇವಲನಿಷ್ಫಲವೆಂದರಿವುದು.॥ ೨೬॥

ಶ್ಲೋ॥ ಇದಮನುಚಿತಮಕ್ರಮಶ್ಚ ಪುಂಸಾಂಯದಿಹ ಜರಾಸ್ವಪಿಮಾನ್ಮ
ಥಾವಿಕಾರಾಃ ॥ ತದಪಿಚನಕೃತಂನಿತಂಬಿನೀನಾಂಸ್ತನಪತನಾವಧಿ
ಜೀವಿತಂರತಂವಾ .... .... ॥೨೭॥

ಟೀ॥ ಸಂಭೋಗಾವಧಿಯನ್ನು ಸೂಚಿಸುತ್ತಾನೆ—ಇಹ=ಈ ಲೋಕದಲ್ಲಿ ಪುಂಸಾಂ=ಪುರುಷರಿಗೆ, ಇದಂ=ಇದು, ಅನುಚಿತಂ=ಅನ್ಯಾಯವು, ಅಕ್ರಮಶ್ಚ=ಅ ವ್ಯವಸ್ಥೆಯು, ಜರಾಸು=ವಾರ್ಧಕಾವಸ್ಥೆಗಳಲ್ಲಿಯೂ, ಮಾನ್ಮಥಾಃ=ಮನ್ಮಥನ ಸಂ ಬಂಧವಾದ, ವಿಕಾರಾಃ=ಆಸಕ್ತಿ ವಿಶೇಷಗಳು, ನಿತಂಬಿನೀನಾಂ=ಅಂಗನೆಯರಿಗೆ, ಸ್ತನ=ಉರೋಜಗಳ, ಪತನ=ಜೋಲುಬೀಳುವಿಕೆಯು, ಅವಧಿ=ವರೆಗೂ, ಜೀವಿತಂ= ಬದುಕುವಿಕೆಯು, ರತಂವಾ=ಸಂಭೋಗವು, ಇತಿಯತ್=ಎಂಬದು ಯಾವದೋ, ತದಪಿ=ಅದು, ನಕೃತಂ=ಮಾಡಲ್ಪಡಲಿಲ್ಲವು, ... ॥೨೭॥

ತಾ॥ ಪುರುಷರಿಗೆ ಮಾತ್ರ ಮುಪ್ಪಿನಲ್ಲಿಯು ಸಂಭೋಗಾಭಿಲಾಷೆ ಗಳನ್ನುಂಟುಮಾಡಿರುವದು ಅಕ್ರಮವಾಗಿಯೂ ಅನ್ಯಾಯವಾಗಿಯೂ ಇರುವದು, ಏಕೆಂದರೆ, ಕಾಮಿನಿಯರಿಗೆ ಕುಚಗಳು ಲಂಬಾಯಮಾನ ಗಳಾಗುವವರೆಗೂ ಅಥವಾ ಜೀವಿತಕಾಲದವರಿಗೂ ಸುರತವು ಸುಂದರವಾ ಗಿಯೂ ಸುಖಕರವಾಗಿಯೂ ಇರುವಂತೆ, ಚತುರಾನನನು ಚಾತುರ್ಯದಿಂದನಿ ರ್ಮಿಸಿದ್ದರೆ ಬಹು ಮನೋಹರವಾಗಿರುತ್ತಿತ್ತು. ಎಂದರೆ ಯುವತಿಯ ಸಹವಾಸವು ಸುಖಾವಹವೆಂದಾಶಯವು .... ॥೨೭॥

ಶ್ಲೋ॥ ರಾಜಂಸ್ತೃಷ್ಣಾಂಬುರಾಶೇರ್ನಹಿಜಗತಿ ಗತಃಕಶ್ಚಿದೇವಾವಸಾನಂ
ಕೋವಾರ್ಥೋರ್ಥೈಃಪ್ರಭೂತೈಃಸ್ವವಪುಷಿಗಳಿತೇಯೌವನೇಸಾ
ನುರಾಗೇ ॥ ಗಚ್ಛಾಮಸ್ಸದ್ಮತಾವದ್ವಿಕಸಿತಕುಮುದೇಂದೀವರಾ
ಲೋಕಿನೀನಾಮಾಕ್ರಮ್ಯಾಕ್ರಮ್ಯರೂಪಂಝಡಿತಿನಜರಯಾಲು
ಪ್ಯತೇಪ್ರೇಯಸೀನಾಂ .... .... ॥೨೮॥

ಟೀ ॥ ರಾಜಸೇವಾಸಕ್ತಿಯಿಂದ ದೇಶಾಂತರವಾಸಿಯಾದ ಬಬ್ಬಾನೊಬ್ಬನ ವಚನವನ್ನು ಅಭಿನಯಿಸಿ ಪೇಳುತ್ತಾನೆ—ಹೇರಾಜನ್=ಎಲೈಅರಸೇ, ಜಗತಿ=ಲೋ ಕದಲ್ಲಿ, ಕಶ್ಚಿದೇವ=ಯಾವನೊಬ್ಬ, ಪುಮಾನ್=ಪುರುಷನು, ತೃಷ್ಣಾ=ಆಶೆಯೆಂಬ,

ಅಂಬುರಾಶೇಃ=ಸಮುದ್ರದ, ಅವಸಾನಂ=ಪಾರವನ್ನು, ನಗತಃ=ಹೊಂದಲಿಲ್ಲವು, ಸ್ವವಪುಷಿ=ತನ್ನ ಶರೀರದಲ್ಲಿ, ಸಾನುರಾಗೇ=ಸಂಭೋಗಾಸಕ್ತಿಯಿಂದೊಡಗೂಡಿದ, ಯೌವನೇ=ಪ್ರಾಯವು, ಗಳಿತೇ = ಶಿಥಿಲವಾಗುತ್ತಿರಲಾಗಿ, ಪ್ರಭೂತೈಃ=ವಿಶೇಷಗಳಾದ, ಅರ್ಥೈಃ=ದ್ರವ್ಯಗಳಿಂದ, ಕೋವಾರ್ಥಃ=ಏನುಪ್ರಯೋಜನವು. ಯಾವತ್=ಎಷ್ಟರೊಳಗಾಗಿ, ವಿಕಸಿತ=ಅರಳಿದ, ಕುಮುದ=ಕುಮುದಪುಷ್ಪಗಳು, ಇಂದೀವರ=ಕನ್ನೈದಿಲೆಗಳಂತೆ, ಆಲೋಕಿನೀನಾಂ=ನೋಟವುಳ್ಳ, ಪ್ರೇಯಸೀನಾಂ=ವಲ್ಲಭೆಯರ, ರೂಪಂ=ಸೌಂದರ್ಯವು, ಆಕ್ರಮ್ಯಾಕ್ರಮ್ಯ=ಪದೇಪದೇ ಆಕ್ರಮಿಸಿ, ಜರಸಾ=ಮುಪ್ಪಿನಿಂದ, ನಲುಪ್ಯತೇ=ಲೋಪ ಮಾಡಲ್ಪಡುವದಿಲ್ಲವೋ, ತಾವತ್=ಅಷ್ಟರೊಳಗಾಗಿ, ಝುಡಿತಿ=ಜಾಗ್ರತೆಯಾಗಿ, ಸದ್ಮ=ಮನೆಯನ್ನು ಕುರಿತು, ಗಚ್ಛಾಮಃ=ಹೋಗೋಣ. ... .... ... ॥೨೮॥

ಆ॥ ಎಲೈ ದೊರೆಯೇ ! ಲಾಲಿಸು—ಈ ಲೋಕದಲ್ಲಿ ಆಶೆಯೆಂಬ ಸಾಗರಕ್ಕೆ ಪಾರವೇ ಇಲ್ಲ. ಮತ್ತು ಈ ಶರೀರದಲ್ಲಿರುವ ನಾನಾವಿಧವಾದ ಸುಖಾನುಭವಕ್ಕೆ ಸಾಧಕವಾದ ಪ್ರಾಯವು ಗಳಿತವಾಗಿ ಹೋದ ತರುವಾಯ ಎಷ್ಟು ಸಂಪತ್ತಿದ್ದರೂ ವ್ಯರ್ಥ. ಆದುದರಿಂದಲೆ ವಿಕಸಿತವಾದ ಕುಮುದೇಂದೀವರಗಳಂತೆ ಆಲೋಕನವುಳ್ಳ ನಮ್ಮ ಕಾಮಿನಿಯರ ಸೌಂದರ್ಯವು ಮುಪ್ಪಿನಿಂದಾಕ್ರಮಿಸಲ್ಪಟ್ಟು ನಷ್ಟವಾಗುವದರೊಳಗಾಗಿ ಮನೆಯನ್ನು ಹೊಂದಿ ಸುಖಾನುಭವವನ್ನು ಮಾಡುವದೇ ಲೇಸೆಂದು ತಿಳಿಯತಕ್ಕದ್ದು. .... .... .... ॥೨೮॥

ಶ್ಲೋ॥ ರಾಗಸ್ಯಾಗಾರಮೇಕಂನರಕಶತ ಮಹಾದುಃಖಸಂಪ್ರಾಪ್ತಿಹೇತು
ರ್ಮೋಹಸ್ಯೋತ್ಪತ್ತಿಬೀಜಂಜಲಧರಪಟಲಂಜ್ಞಾನತಾರಾಧಿಪಸ್ಯ ॥
ಕಂದರ್ಪಸ್ಯೈಕಮಿತ್ರಂಪ್ರಕಟಿತ ವಿವಿಧಸ್ಪಷ್ಟದೋಷಪ್ರಬಂ
ಧಂಲೋಕೇಸ್ಮಿನ್ನಹ್ಯನರ್ಥ ವ್ರಜಕುಲಭವನಂಯೌವನಾದನ್ಯ
ದಸ್ತಿ .... .... .... ॥೨೯॥

ಟೀ॥ ಪ್ರಾಯವು ಸಕಲಾನರ್ಥನಿದಾನವೆಂದು ಹೇಳುತ್ತಾನೆ. — ರಾಗಸ್ಯ=ಮಾತ್ಸರ್ಯಕ್ಕೆ, ಏಕಂ=ಮುಖ್ಯವಾದ, ಅಗಾರಂ=ಮನೆಯಾದ, ನರಕಶತ=ರೌರವಾದಿ ನೂರಾರು ನರಕಗಳಲ್ಲಿ ಉಂಟಾಗುವ, ಮಹಾ=ವಿಪರೀತವಾದ, ದುಃಖ=ಯಾತನೆಗಳ, ಸಂಪ್ರಾಪ್ತಿ=ಲಾಭಕ್ಕೆ. ಹೇತುಃ=ಕಾರಣವಾದ, ಮೋಹಸ್ಯ=ಭ್ರಾಂತಿಯ, ಉತ್ಪತ್ತಿಬೀಜಂ=ಜನನ ಬೀಜವಾದ, ಜ್ಞಾನತಾರಾಧಿಪಸ್ಯ=ತಿಳುವಳಿಕೆಯೆಂಬ ಚಂದ್ರನಿಗೆ ಜಲಧರಪಟಲಂ=ಮೇಘಪುಂಜ ಸಮಾನವಾದ, ಕಂದರ್ಪಸ್ಯ=ಮನ್ಮಥನಿ

ಗೆ, ಏಕಮಿತ್ರಂ=ಮುಖ್ಯ ಸ್ನೇಹಸ್ಥಾನವಾದ, ಪ್ರಕಟಿತ=ಪ್ರಸಿದ್ಧವಾದ, ವಿವಿಧ=ನಾನಾಪ್ರಕಾರವಾದ, ಸ್ಪಷ್ಟ=ನಿಸ್ಸಂಶಯವಾದ, ದೋಷ=ದೋಷಗಳ, ಪ್ರಪಂಚಃ=ರಾಶಿಯಾದ, ಯೌವನಾತ್=ಪ್ರಾಯಕ್ಕಿಂತಲೂ, ಅನ್ಯತ್=ಮತ್ತೊಂದು ಅನರ್ಥ=ಕೇಡುಗಳ, ವ್ರಜ=ಸಮುದಾಯಗಳಿಗೆ, ಕುಲಭವನಂ=ಜನ್ಮಭೂಮಿಯು ನಾಸ್ತಿ=ಇಲ್ಲವು, ... ... ... ||೨೯||

ತಾ|| ಮಾತ್ಸರ್ಯಕ್ಕೆ ಅಥವಾ ವಿಷಯಾಭಿಲಾಷೆಗೆ ಮುಖ್ಯಸ್ಥಾನವಾಗಿ, ರೌರವಾದಿ ನರಕಗಳಲ್ಲುಂಟಾಗುವ ವಿಚಿತ್ರವಾದ ಯಮಯಾತನೆಗಳ ಪ್ರಾಪ್ತಿಗೆ ಮೂಲವೆಂದೆನಿಸಿ,ಭ್ರಾಂತಿಗೆ ಮೂಲಕಾರಣವಾಗಿ, ವಿವೇಕದಪ್ರಕಾಶಕ್ಕೆ ಲೇಶವಾದರೂ ಆಸ್ಪದವನೀಯದೆ, ಕಾಮಸಿಗೆ ಮುಖ್ಯಬಂಧುವಾಗಿ, ಮತ್ತು ಲೋಕಪ್ರಸಿದ್ಧವಾಗಿರುವ ಪರಮದೋಷಗಳಿಗೆ ತೌರುಮನೆಯಾಗಿಯೂ ಇರುವ ಪ್ರಾಯಕ್ಕಿಂತಲೂ ಮತ್ತೊಂದು ಕೇಡುಗಳಿಗಾಕರವಾದ ಎಡೆಯಿಲ್ಲವು. ಆದಕಾರಣ ಬುದ್ಧಿವಂತನು ಈಪ್ರಾಯದೊಳು ಉಪಾಯದಿಂದ ಅನರ್ಥಗಳಿಗಾಸ್ಪದವನುಕೊಡದೆ ವಿವೇಕಿಯಾಗಿರಬೇಕೆಂದು ಪರ್ಯವಸಿತವಾದ ತಾತ್ಪರ್ಯವು. .... .... ||೨೯||

ಶ್ಲೋ|| ಶೃಂಗಾರದ್ರುಮನೀರದೇಪ್ರಸೃಮರಕ್ರೀಡಾರಸಸ್ರೋತಸಿಪ್ರದ್ಯು
ಮ್ನಪ್ರಿಯಬಾಂಧವೇಚತುರವಾಙ್ಮುಕ್ತಾಫಲೋದನ್ವತಿ || ತನ್ವೀ
ನೇತ್ರಚಕೋರಪಾರ್ವಣವಿಧೌ ಸೌಭಾಗ್ಯಲಕ್ಷ್ಮೀನಿಧೌ ಧನ್ಯಃ
ಕೋಪಿನವಿಕ್ರಿಯಾಂಕಲಯತೇಪ್ರಾಪ್ತೇನವೇಯೌವನೇ ||೩೦||

ಟೀ|| ಅನೇಕಾನರ್ಥಗಳಿಗೆ ಕಾರಣವಾದ ತಾರುಣ್ಯದಲ್ಲಿ ಅನೇಕರಲ್ಲೊಬ್ಬನು ವಿಕಾರವನ್ನುಹೊಂದದೆ ಇರುವನೆಂದು ಹೇಳುತ್ತಾನೆ—ಶೃಂಗಾರ=ಶೃಂಗಾರ ರಸವೆಂಬ, ದ್ರುಮ=ವೃಕ್ಷಕ್ಕೆ, ನೀರದೇ=ಮೇಘದಂತಿರುವ, ಪ್ರಸೃಮರ=ಅವಿಚ್ಛಿನ್ನವಾದ ಕ್ರೀಡಾವಿಹಾರಗಳೆಂಬ, ರಸ=ರಸಗಳ, ಸ್ರೋತಸಿ=ಪ್ರವಾಹರೂಪವಾದ, ಪ್ರದ್ಯುಮ್ನ=ಮನ್ಮಥನಿಗೆ, ಪ್ರಿಯಬಾಂಧವೇ=ಮುಖ್ಯಬಂಧುವಾದ, ಚತುರ=ಕುಶಲವಾದ, ವಾಕ್=ಮಾತುಗಳೆಂಬ, ಮುಕ್ತಾಫಲ=ಮುತ್ತುಗಳಿಗೆ, ಉದನ್ವತಿ=ಸಮುದ್ರಪ್ರಾಯವಾದ, ತನ್ವೀ=ಕೃಶಾಂಗಿಯರ, ನೇತ್ರ=ನಯನಗಳೆಂಬ, ಚಕೋರ=ಚಕ್ರವಾಕಪಕ್ಷಿಗಳಿಗೆ, ಪಾರ್ವಣವಿಧೌ=ಪೂರ್ಣಿಮಾ ಚಂದ್ರನಂತಿರುವ, ಸೌಭಾಗ್ಯಲಕ್ಷ್ಮೀ=ಸೌಂದರ್ಯಸಂಪತ್ತಿಗೆ, ನಿಧೌ=ನಿಕ್ಷೇಪವಾದ, ನವ=ನೂತನವಾದ, ಯೌವನ=ಪ್ರಾಯವು, ಪ್ರಾಪ್ತೇಸತಿ=ಉಂಟಾಗುತ್ತಿರಲಾಗಿ, ಧನ್ಯಃ=ಸುಕೃತಿಯಾದ ಕೋಪಿ=ಒಬ್ಬಾನೊಬ್ಬನು, ವಿಕ್ರಿಯಾಂ=ವಿಕಾರವನ್ನು,ನಕಲಯತೇ=ಹೊಂದುವದಿಲ್ಲವು. .... .... ... ||೩೦||

ತಾ॥ ಅನೇಕವಿಧವಾದ ಶೃಂಗಾರರಸಕ್ಕೆ ಪೋಷಕವಾಗಿ, ವಿಚಿತ್ರವಾದ ವಿಲಾಸಗಳಿಗಾಕಾರವೆಂದೆನಿಸಿ, ಚತುರವಾದ ವಚನಗಳಿಗೆ ತೌರುಮನೆಯಾಗಿ, ಕೃಶಾಂಗಿಯರಾದ ಅಂಗನೆಯರ ನಯನಗಳಿಗಾನಂದವನ್ನುಂಟುಮಾಡುತ, ಸರ್ವೋತ್ತಮವಾದ ಸೌಂದರ್ಯಸಂಪತ್ತಿಗೆಡೆಯಾಗಿಯೂ ಇರುವ ನೂತನವಾದ ಪ್ರಾಯವು ಬಂದ ಸಂದರ್ಭದೊಳು ಲೋಕದಲ್ಲಿ ಅನೇಕರಲ್ಲೊಬ್ಬ ಮಹಾ ಸುಕೃತ ಶಾಲಿಯಾದ ವಿವೇಕಿಯು ವಿವಿಧವಾದ ವಿಕಾರವನ್ನೈದದೆ ಸನ್ಮಾರ್ಗದೊಳಿರುವನಲ್ಲದೆ ಸಾಧಾರಣವಾಗಿ ಎಲ್ಲರೂ ಇರಲಾರರೆಂದು ಭಾವವು. .... .... ॥೨೯॥

ಶ್ಲೋ॥ ಸಂಸಾರೇಸ್ಮಿನ್ನಸಾರೇಕುನೃಪತಿಭವನದ್ವಾರಸೇವಾಕಳಂಕವ್ಯಾ
ಸಂಗವ್ಯಸ್ತಧೈರ್ಯಂಕಥಮಮಲಧಿಯೋಮಾನಸಂಸಂವಿದಧ್ಯುಃ ॥
ಯದ್ಯೇತಾಃಪ್ರೋದ್ಯದಿಂದುದ್ಯುತಿನಿಚಯಭೃತೋನಸ್ಯುರಂಭೋ
ಜನೇತ್ರಾಃ ಪ್ರೇಂಖತ್ಕಾಂಚೀಕಲಾಪಾಸ್ತನಭರವಿನಮನ್ಮಧ್ಯಭಾ
ಜಸ್ತರುಣ್ಯಃ ॥ .... .... .... ॥೩೦॥

ಟೀ॥ ಕಾಮಿನೀ ಪರಿತ್ಯಾಗವಂ ಮಾಡಲು ತಾರುಣ್ಯವನರ್ಥಹೇತುವಲ್ಲವೆಂದು ಸೂಚಿಸುತ್ತಾನೆ—ಪ್ರೋದ್ಯತ್=ಉತ್ಪನ್ನವಾದ, ಇಂದು=ಚಂದ್ರನಂತೆ, ದ್ಯುತಿ=ಕಾಂತಿಯುಳ್ಳ, ನಿಚಯ=ವಸ್ತ್ರಗಳನ್ನು, ಭೃತಃ=ಧರಿಸುವ, ಅಂಭೋಜನೇತ್ರಾಃ=ಕಮಲದಂತೆನೇತ್ರವುಳ್ಳ, ಪ್ರೇಂಖತ್=ಚಲಿಸುವ, ಕಾಂಚೀ=ಡಾಬೆಂಬ, ಕಲಾಪಾಃ=ಆಭರಣವುಳ್ಳ, ಸ್ತನ=ಕುಚಗಳ, ಭರ=ಭಾರದಿಂದ, ವಿನಮತ್=ನಮ್ರವಾದ, ಮಧ್ಯ=ನಡುವನ್ನು, ಭಾಜಃ=ಹೊಂದಿರುವ, ತರುಣ್ಯಃ=ಯುವತಿಯರು, ನಸ್ಯುಃ=ಇಲ್ಲದಿದ್ದರೆ, ಅಮಲಧಿಯಃ=ನಿರ್ಮಲವಾದ ಬುದ್ಧಿಯುಳ್ಳ ಮಹನೀಯರು, ಮಾನಸಂ=ನಿಜಚಿತ್ತವನ್ನು, ಅಸಾರೇ=ನಿಸ್ಸಾರವಾದ, ಅಸ್ಮಿನ್=ಈ, ಕುನೃಪತಿ=ಕುತ್ಸಿತರಾಜರ, ಭವನ=ಮನೆಗಳ, ದ್ವಾರ=ಬಾಗಿಲುಗಳಲ್ಲಿ, ಸೇವಾ=ಅನುಸರಿಸುವಿಕೆಯೆಂಬ, ಕಳಂಕ=ಅಪವಾದದಲ್ಲಿ, ವ್ಯಾಸಂಗ=ಆಸಕ್ತಿಯಿಂದ, ವ್ಯಸ್ತ=ವ್ಯತ್ಯಸ್ತವಾದ, ಧೈರ್ಯಂ=ಧೀರತ್ವವುಳ್ಳದ್ದನ್ನಾಗಿ, ಕಥಂಸಂವಿದಧ್ಯುಃ=ಹೇಗೆ ಮಾಡುತ್ತಿದ್ದರು? ॥೩೧॥

ತಾ॥ ಉತ್ತಮವಾದ ಡಾಬು ಮೊದಲಾದ ಆಭರಣಗಳುಳ್ಳವರಾಗಿ, ಕೆಂದಾವರೆಗಳಂತೆ ಕಣ್ಣುಗಳಿಂದ ಶೋಭಿಸುತ್ತಲಿರುವ ಪೂರ್ಣಚಂದ್ರಾನನೆಯರಾದ ತರುಣಿಯರೇ ಇಲ್ಲದೆ ಹೋಗಿದ್ದರೆ, ನಿರ್ಮಲವಾದ ಮತಿಯುಳ್ಳ ಯಾವ ಮಹನೀಯರು ಈ ಜನನ ಮರಣ ಪ್ರವಾಹರೂಪವಾದ ಸಂಸಾರದಲ್ಲಿದ್ದುಕೊಂಡು, ತಮ್ಮ ಮನಸ್ಸನ್ನು ಕುತ್ಸಿತರಾದ ಭೂಮಿಪಾಲ

ಕರ ಮನೆಯ ಹೊರಬಾಗಿಲೊಳು ಬಹು ಕಳಂಕದಿಂದ ಕಾಯುವಿಕೆಯೆಂಬ ಸೇವೆಯಿಂದ ಮಲಿನವಾದದ್ದನ್ನಾಗಿ ಮಾಡಿಕೊಂಡಾರು ? ಎಂದರೆ ಈ ಕಾಮಿನಿಯರೇ ಅನರ್ಥಕ್ಕೆ ಮೂಲವಾದ ಕಾರಣ ಉಪಾಯವಾಗಿ ಅವರಿಂದ ಮನಸ್ಸನ್ನು ಹಿಂತಿರುಗಿಸಬೇಕೆಂದು ಭಾವವು. .... ॥೩೧॥

ಶ್ಲೋ॥ ಸಿದ್ಧಾಧ್ಯಾಸಿತಕಂದರೆಹರವೃಷಸ್ಕಂಧಾವರುಗ್ಣದ್ರುಮೆಗಂಗಾಧೌತಶಿಲಾತಲೆಹಿಮವತಸ್ಸ್ಥಾನೆಸ್ಥಿತೇಶ್ರೇಯಸಿ ॥ ಕಃಕುರ್ವೀತಶಿರಃಪ್ರಣಾಮಮಲಿನಂಮ್ಲಾನಂಮನಸ್ವೀಜನೋ ಯದ್ವಿತ್ರಸ್ತಕುರಂಗಶಾಬನಯನಾನಸ್ಯುಸ್ಸ್ಮರಾಸ್ತ್ರಂಸ್ತ್ರಿಯಃ ॥೩೨॥

ಟೀ॥ ಸಿದ್ಧ=ಯೋಗಿಗಳಿಂದ, ಅಧ್ಯಾಸಿತ=ಆಶ್ರಯಿಸಲ್ಪಟ್ಟ, ಕಂದರೆ=ಗುಹೆಗಳುಳ್ಳ, ಹರ=ಈಶ್ವರನ, ಸ್ಕಂದ=ಹೆಗಲಿನಿಂದ, ಅವರುಗ್ಣ=ಭಗ್ನವಾದ. ದ್ರುಮೆ=ವೃಕ್ಷವುಳ್ಳ, ಗಂಗಾ=ಭಾಗೀರಥಿಯಿಂದ, ಧೌತ=ಶುದ್ಧವಾದ, ಶಿಲಾತಲೆ=ಪಾಷಾಣಪ್ರದೇಶವುಳ್ಳ, ಶ್ರೇಯಸಿ=ಶ್ರೇಯಸ್ಕರವಾದ, ಹಿಮವತಃ=ಹಿಮವತ್ಪರ್ವತದ, ಸ್ಥಾನೆ=ಪ್ರದೇಶವು, ಸ್ಥಿತೆ=ಇರುತ್ತಿರಲಾಗಿ, ವಿತ್ರಸ್ತ=ಭಯಪಟ್ಟ, ಕುರಂಗಶಾಬ=ಜಿಂಕೆಯಮರಿಯ ನಯನದಂತೆ, ನಯನಾಃ=ಕಣ್ಣುಗಳುಳ್ಳ, ಸ್ಮರಾಸ್ತ್ರಂ=ಮನ್ಮಥನಿಗೆ ಬಾಣವಾದ, ಸ್ತ್ರಿಯಃ=ಕಾಮಿನಿಯರು, ನಸ್ಯುರ್ಯದಿ=ಇಲ್ಲದೆ ಇದ್ದರೆ, ಮನಸ್ವೀ=ಧೀರನಾದ, ಕಃಜನಃ=ಯಾವ ಮನುಷ್ಯನು, ಶಿರಃ=ತನ್ನ ಶಿರಸ್ಸನ್ನು, ಪ್ರಣಾಮ=ಕುರಾಜವಂದನದಿಂದ, ಮಲಿನಂ=ಪ್ರತಿಷ್ಠಾರಹಿತವೆನಿಸುವ, ಮ್ಲಾನಂ=ಹೀನವಾದದ್ದನ್ನಾಗಿ, ಕುರ್ವೀತ=ಮಾಡಿಯಾನು ? .... ॥೩೨॥

ತಾ॥ ಮಹಾ ಯೋಗಿಗಳು ವಾಸಮಾಡುವ ಗುಹೆಗಳುಳ್ಳದ್ದಾಗಿ, ಹರ ಸಾನ್ನಿಧ್ಯದಿಂದೆಸೆಯುತ, ಭಾಗೀರಥೀಜಲದಿಂದ ಶುದ್ಧವಾದ ಶಿಲಾತಲಗಳುಳ್ಳದ್ದರಿಂದಲೇ ಶ್ರೇಯಸ್ಕರವಾದ ಮೇರುಗಿರಿಯ ಪ್ರದೇಶವು ಸಿದ್ಧವಾಗಿರುವಲ್ಲಿ, ಅದನ್ನು ಬಿಟ್ಟು ಕಾಮನಿಗೆ ಕಠೋರವಾದ ಕಾರ್ಮುಕದಂತಿರುವ ಕುರಂಗನಯನೆಯರಾದ ಕಾಮಿನಿಯರೇ ಇಲ್ಲದೆ ಹೋದರೆ, ಮತ್ತೆ ಯಾವ ಧೀರನಾದ ಮನುಜನು ಕುತ್ಸಿತರಾದ ರಾಜರ ಬಳಿಗೆ ಹೋಗಿ ಅವರಿಗೆ ನಮಸ್ಕರಿಸಿ ಅದರಿಂದ ತನ್ನ ಉತ್ತಮಾಂಗವನ್ನು ಹೀನವಾದದ್ದನ್ನಾಗಿ ಮಾಡಿಕೊಳ್ಳುವನು? ಎಂದರೆ ಹರಿಣನಯನೆಯರಾದ ತರುಣಿಯರೇ ಸರ್ವಾನರ್ಥಮೂಲವೆಂದಾಶಯವು. .... .... ॥೩೨॥

ಶ್ಲೋ॥ ಸಂಸಾರತವಪರ್ಯಂತಪದವೀನದವೀಯಸೀ ॥ ಅಂತರಾದುಸ್ತರಾನಸ್ಯುರ್ಯದಿತೇಮದಿರೇಕ್ಷಣಾಃ ॥ .... ॥೩೩॥

ಟೀ॥ ಹೇಸಂಸಾರ=ಎಲೈ ಸಂಸಾರವೇ, ತವ=ನಿನ್ನ, ಪರ್ಯಂತಪದವೀ=ಸಾಕಲ್ಯಪ್ರದೇಶವು, ತೇ=ನಿನ್ನ, ಅಂತರಾ=ನಡುವೆ, ದುಸ್ತರಾಃ=ದಾಟಲಶಕ್ಯವಾದ ನದಿಗಳಂತಿರುವ, ಮದಿರೇಕ್ಷಣಾಃ=ಕಾಮಿನಿಯರು, ನಸ್ಯುರ್ಯದಿ=ಇಲ್ಲದಿದ್ದರೆ, ನದವೀಯಸೀ=ದೂರವಲ್ಲವು. .... .... ... ॥೪೩॥

ತಾ॥ ನಡುವೆ ಕುರಂಗನಯನೆಯರಾದ ಕಾಮಿನಿಯರೆಂಬ ದಾಟಲಶಕ್ಯವಾದ ಮಹಾನದಿಗಳೇ ಇಲ್ಲದೆಹೋದರೆ, ಸಂಸಾರವೆಂಬ ಸಾಗರವನ್ನು ದಾಟುವದು ಲೇಶವೂ ಪ್ರಯಾಸವಲ್ಲವು. ಎಂದರೆ ಜನನಮರಣ ಪ್ರವಾಹರೂಪವಾದ ಸಂಸಾರ ಸಾಗರದೊಳು ಮುಳುಗಲು ಕಾಂತೆಯರೇ ಕಾರಣವೆಂದರಿವುದು. .... .... .... ॥೪೪॥

ಶ್ಲೋ॥ ದಿಶವನಹರಿಣೀಭ್ಯೋವಂಶಕಾಂಡಚ್ಛವೀನಾಂಕಬಳಮುಪಲಕೋಟಿಚ್ಛಿನ್ನಮೂಲಂಕುಶಾನಾಂ ॥ ಶುಕಯುವತಿಕಪೋಲಾಪಾಂಡುತಾಂಬೂಲವಲ್ಲೀದಳಮರುಣನಖಾಗ್ರೈಃಪಾಟಿತಂವಾವಧೂಭ್ಯಃ॥

ಟೀ॥ ವನಹರಿಣೀಭ್ಯಃ=ಕಾಡಿನೊಳಿರುವ ಕುರಂಗಗಳಿಗೆ, ಉಪಲ=ಪಾಷಾಣಗಳ, ಕೋಟಿ=ಕೊನೆಯಿಂದ, ಛಿನ್ನ=ಕತ್ತರಿಸಲ್ಪಟ್ಟ, ಮೂಲಂ=ಬುಡವುಳ್ಳ, ವಂಶ=ಬಿದುರುಗಳ, ಕಾಂಡ=ದಂಡದಂತಿರುವ, ಛವೀನಾಂ=ಕಾಂತಿಯುಳ್ಳ, ಕುಶಾನಾಂ=ದರ್ಭೆಹುಲ್ಲುಗಳ, ಕಬಳಂ=ಗ್ರಾಸವನ್ನು, ದಿಶ=ಕೊಡು, ಅಥವಾ=ಹಾಗಿಲ್ಲದಿದ್ದರೆ, ವಧೂಭ್ಯಃ=ಪ್ರಿಯತಮೆಯರಿಗೆ, ಅರುಣ=ಕೆಂಪಾದ, ನಖ=ಉಗುರುಗಳ, ಅಗ್ರೈಃ=ಕೊನೆಗಳಿಂದ, ಪಾಟಿತಂ=ತುಂಡುಮಾಡಲ್ಪಟ್ಟ, ಶುಕಯುವತಿ=ಹೆಣ್ಣುಗಿಣಿಗಳ (ಶಕಯುವತಿ=ಶಕದೇಶಾಂಗನೆಯರ) ಕಪೋಲ=ಕೆನ್ನೆಯಂತೆ, ಆಪಾಂಡು=ಸ್ವಲ್ಪ ಶುಭ್ರವಾದ. ತಾಂಬೂಲವಲ್ಲೀದಳಂ=ವೀಳಯದೆಲೆಯನ್ನು, ದಿಶ=ಕೊಡು.

ತಾ॥ ವಿರಕ್ತಿಯುಂಟಾಗಿ ತಪಸ್ಸು ಮಾಡಬೇಕೆಂಬದಾಗಿ ಕೋರಿಕೆಯುಂಟಾದರೆ ಕಾಡಿಗೆ ಹೋಗಿ ವಾಸಮಾಡುತ್ತ ಅಲ್ಲಿರುವ ಹಸರು ಹುಲ್ಲನ್ನು ಕಲ್ಲಿನ ಕೊನೆಯಿಂದ ಕೊಯಿದು ಹರಿಣ ಶಿಶುಗಳಿಗೆ ಕಬಳವ ಮಾಡಿಕೊಡು, ಹಾಗಿಲ್ಲದೆ ಅನುರಕ್ತಿಯುಂಟಾಗಿದ್ದರೆ ಅತ್ಯಂತ ಎಳೆಯದಾಗಿರುವ ವೀಳಯದೆಲೆಗಳನ್ನುಮಡಿಸಿ ನಿನ್ನ ಕಾಮಿನಿಯರಿಗೆಕೊಡುತ್ತ ಭೋಗವನ್ನಾದರೂ ಅನುಭವಿಸು, ಇಹಪರಗಳೆಂಬೆರಡು ಬಗೆಯಾದ ಸುಖದಿಂದಲೂ ಭ್ರಷ್ಟನಾಗಬಾರದೆಂದು ಭಾವವು. .... ॥೪೫॥

ಶ್ಲೋ॥ ಅಸಾರಾಸ್ಸರ್ವೇತೇವಿರತಿವಿರಸಾಃಪಾಪವಿಷಯಾಜುಗುಪ್ಸ್ಯಂತಾಂ

ಯದ್ವಾನನುಸಕಲದೋಷಾಸ್ಪದಮಿತಿ ॥ ತಥಾಪ್ಯೇತದ್ಭೂಮೌನ
ಹಿಪರಹಿತಾತ್ಪುಣ್ಯಮಧಿಕಂ ನಚಾಸ್ಮಿನ್ಸಂಸಾರೇಕುವಲಯ ದೃ
ಶೋರಮ್ಯಮಪರಂ .... .... ॥೩೫॥

ಟೀ॥ ಹೇಜನಾಃ–ಎಲೈ ಜನಗಳಿರಾ, ತೇ–ಪ್ರಸಿದ್ಧಗಳಾದ, ಸರ್ವೇ–ಸಮಸ್ತವಾದ, ಪಾಪ–ಸಾಪಿಷ್ಠಗಳಾದ, ವಿಷಯಾಃ–ಹೂವು ಗಂಧ ಹೆಣ್ಣು ಮೊದಲಾದ ವಿಷಯಗಳು, ಅಸಾರಾಃ–ಸಾರವಿಲ್ಲದವುಗಳು, ವಿರತಿ–ಪರಿಣಾಮದಲ್ಲಿ. ವಿರಸಾಃ–ಅನರ್ಥಕರಗಳು, ಯದ್ವಾ–ಅಥವಾ, ಸಕಲ–ಸಮಸ್ತವಾದ, ದೋಷ–ರಾಗದ್ವೇಷಾದಿ ದೋಷಗಳಿಗೆ, ಆಸ್ಪದಮ್–ಸ್ಥಾನವು, ಇತಿ–ಹೀಗೆಂದಾದರೂ, ಜುಗುಪ್ಸ್ಯಂತಾಂ–ಬಿಡಲ್ಪಡಲಿ, ತಥಾಪಿ–ಆದರೂ, ಏತದ್ಭೂಮೌ–ಈ ಭೂಮಂಡಲದಲ್ಲಿ, ಪರಹಿತಾತ್–ಪರೋಪಕಾರ ಮಾಡುವದಕ್ಕಿಂತಲೂ, ಅಧಿಕಂ–ಹೆಚ್ಚಾದ, ಪುಣ್ಯಂ–ಸುಕೃತವು, ನಾಸ್ತಿ–ಇಲ್ಲವು, ಅಸ್ಮಿನ್ ಸಂಸಾರೇ–ಈ ಸಂಸಾರದೊಳಗೆ, ಕುವಲಯದೃಶಃ–ನೈದಿಲೆಯಂತೆ ನಯನವುಳ್ಳನಾರಿಗಿಂತಲೂ, ಅಪರಂ–ಮತ್ತೊಂದು, ರಮ್ಯಂ–ರಮಣೀಯವಾದ ವಸ್ತುವು, ನಚ–ಇಲ್ಲವು, ... ... ॥೩೫॥

ತಾ॥ ಎಲೈ ಜನಗಳಿರಾ! ಲಾಲಿಸಿರಿ—ಹೂವು, ಗಂಧ, ಹಣ್ಣು, ಹೆಣ್ಣು ಮೊದಲಾದ ವಿಷಯಗಳನ್ನು ಸಾರಶೂನ್ಯವಾದವುಗಳೆಂದೂ, ಅಥವಾ ಪರಿಣಾಮದೊಳು ಕೇಡನ್ನುಂಟುಮಾಡತಕ್ಕವುಗಳೆಂದೂ ಇಲ್ಲವೆ ರಾಗದ್ವೇಷ ಮೋಹಾದಿದೋಷಗಳಿಗೆ ಮುಖ್ಯಾಸ್ಪದವೆಂದಾದರೂ ತಿಳಿದು ಅವುಗಳನ್ನು ತ್ಯಾಗಮಾಡಬೇಕಾಗಿಯೇ ಇರುವದು ; ಆದರೂ ಈ ಭೂಲೋಕದಲ್ಲಿ ಪರೋಪಕಾರ ಮಾಡುವದಕ್ಕಿಂತಲೂ ಮತ್ತೊಂದುತ್ತಮವಾದದ್ದಿಲ್ಲವು. ಜನನಮರಣ ಪ್ರವಾಹರೂಪವಾದ ಸಂಸಾರದಲ್ಲಿಯಾದರೂ ಕನ್ನೈದಿಲೆಯಂತೆ ನಯನವುಳ್ಳ ತರುಣಿಗಿಂತಲೂ ಇನ್ನೊಂದು ರಮಣೀಯವಾದ ವಸ್ತುವು ಯಾವದೂ ಇಲ್ಲವು. .... ॥೩೫॥

ಶ್ಲೋ॥ ಮಾತ್ಸರ್ಯಮುತ್ಸಾರ್ಯವಿಚಾರ್ಯ ಕಾರ್ಯಮಾರ್ಯಾಸ್ಸಮರ್ಯಾದಮಿದಂ
ಬ್ರುವಂತು ॥ ಸೇವ್ಯಾನಿತಂಬಾಃಕಿಮುಭೂಧರಾಣಾಮುತಸ್ಮರ
ಸ್ಮೇರವಿಲಾಸಿನೀನಾಂ .... .... ॥೩೬॥

ಟೀ॥ ಆರ್ಯಾಃ–ಪಂಡಿತರು, ಮಾತ್ಸರ್ಯಂ–ಅಸೂಯೆಯನ್ನು, ಉತ್ಸಾರ್ಯ–ನಿಬಿಟ್ಟು, ಸ್ಮರ–ಮನ್ಮಥನಿಂದ. ಸ್ಮೇರ–ಹೊಳೆವ, ವಿಲಾಸಿನೀನಾಂ–ಸುಂದರಿಯರ ತಂಬಾಃ=ಕಟಿಪಶ್ಚಾದ್ಭಾಗಗಳು, ಸೇವ್ಯಾಃ=ಸೇವಿಸುವದಕ್ಕೆ ಯೋಗ್ಯವಾದವು, ಗಳೆ? ಭೂಧರಾಣಾಂ–ರಾಜರ, (ಪರ್ವತಗಳ) ನಿತಂಬಾಃ–ಕಟಿಪಶ್ಚಾದ್ಭಾಗಗಳು

(ಪ್ರಾಂತಭೂಮಿಗಳು) ಸೇವ್ಯಾಃ=ಸೇವಿಸುವದಕ್ಕೆ ಯೋಗ್ಯವಾದವುಗಳೆ? ವಿಚಾರ್ಯ=ವಿಚಾರಮಾಡಿ, ಬ್ರುವಂತು=ಹೇಳಲಿ, .... .... ||೩೬||

ತಾ|| ಪ್ರಾಯವು ಪ್ರಾದುರ್ಭವಿಸಿ ಸಂಭೋಗದೌತ್ಸುಕ್ಯವನ್ನು ಸೂಚಿಸುವ ಮಂದಹಾಸದಿಂದ ಸುಂದರವಾದ ವದನಾರವಿಂದವುಳ್ಳ ಕಾಮಿನಿಯರ ಪೃಷ್ಠಭಾಗಗಳನ್ನು ಸೇವಿಸಬೇಕೇ? ಇಲ್ಲವೆ ಹಿಮಾಲಯದ ನಿತಂಬಪ್ರದೇಶವನ್ನು ಸೇವಿಸಬೇಕೆ? ಆರ್ಯರಾದವರು ಅಸೂಯೆಯನ್ನು ತೊರೆದು ವಿಚಾರಮಾಡಿ ಇವೆರಡರಲ್ಲಿ ಅವಶ್ಯಕರ್ತವ್ಯವಾದದ್ದನ್ನು ಹೇಳಲಿ, ಎಂದರೆ ವೈರಾಗ್ಯ ಸಂಪತ್ತು ಒಡಗೂಡಿದ್ದ ಪರ್ವತ ಪ್ರಾಂತಗಳನ್ನಾಶ್ರಯಿಸಿ ತಪಸ್ಸು ಮಾಡಬಹುದು. ಹಾಗಿಲ್ಲದಿದ್ದರೆ ಕಾಮಿನಿಯರ ಪೃಷ್ಠಗಳನ್ನೇ ಸೇವಿಸಬಹುದೆಂದಾಶಯವು. .... ||೩೬||

ಶ್ಲೋ|| ಸಂಸಾರೇಸ್ವಪ್ನಸಾರೇಪರಿಣತಿತರಳೇದ್ವೇಗತೀಪಂಡಿತಾನಾಂತತ್ವ
ಜ್ಞಾನಾಮೃತಾಂಭಃಪ್ಲವಲಲಿತಧಿಯಾಂಯಾತುಕಾಲಃಕಥಂಚಿತ್॥
ನೋಚೇನ್ಮುಗ್ಧಾಂಗನಾನಾಂಸ್ತನಘನಜಘನಾಭೋಗ ಸಂಭೋಗಿ
ನೀನಾಂ ಸ್ಥೂಲೋಪಸ್ಥಸ್ಥಲೀಷು ಸ್ಥಗಿತಕರತಲಸ್ಪರ್ಶಲೀಲೋ
ದ್ಯಮಾನಾಂ .... .... ||೩೭||

ಟೀ|| ಸ್ವಪ್ನಸಾರೆ=ಸ್ವಪ್ನಪದಾರ್ಥದಂತೆ ಅಸ್ಥಿರವಾದ, ಪರಿಣತಿತರಳೆ=ಪರಿಣಾಮದೊಳು ಸ್ಥಿರವಲ್ಲದ, ಸಂಸಾರೆ=ಸಂಸಾರದೊಳು, ಪಂಡಿತಾನಾಂ=ವಿವೇಕಿಗಳಿಗೆ, ದ್ವೇಗತೀ=ಎರಡವಸ್ಥೆಗಳು, ತತ್ವಜ್ಞಾನ=ಬ್ರಹ್ಮಜ್ಞಾನವೆಂಬ, ಅಮೃತಾಂಭಃ=ಶುದ್ಧೋದಕದಲ್ಲಿ, ಪ್ಲವ=ತೇಲುವದರಿಂದ, ಲಲಿತ=ಸುಂದರವಾದ, ಧಿಯಾಂ=ಬುದ್ಧಿಯುಳ್ಳವರಿಗೆ, ಕಥಂಚಿತ್=ಬಹುಪ್ರಯತ್ನದಿಂದ, ಕಾಲಃ=ಸಮಯವು, ಯಾತು=ಹೋಗಲಿ, (ಕಳೆಯಲಿ) ನೋಚೇತ್=ಹಾಗಿಲ್ಲವಿದ್ದರೆ, ಸ್ತನ=ಉರೋಜಗಳ, ಘನ=ನಿಬಿಡವಾದ, ಜಘನ=ಕಟಿಪುರೋಭಾಗಗಳ, ಆಭೋಗ=ವಿಸ್ತಾರದಲ್ಲಿ, ಸಂಭೋಗಿನೀನಾಂ=ಸಂಭೋಗೇಚ್ಛೆಯುಳ್ಳ, ಮುಗ್ಧಾಂಗನಾನಾಂ=ನವಯುವತಿಯರ, ಸ್ಥೂಲೋಪಸ್ಥಸ್ಥಲೀಷು=ವರ್ತುಲೋಚ್ಛ್ರಿತ ಮದನ ಸದನ ಪ್ರದೇಶಗಳಲ್ಲಿ, ಸ್ಥಗಿತ=ಹೊಂದಿಸಲ್ಪಟ್ಟ, ಕರತಲ=ಹಸ್ತಪ್ರದೇಶದ, ಸ್ಪರ್ಶ=[illegible], ಲೀಲಾ=ವಿಲಾಸದಲ್ಲಿ, ಉದ್ಯಮಾನಾಂ=ಪ್ರಯತ್ನಪಟ್ಟವರಿಗೆ, ಕಾಲಃ=ಸಮಯವು, ಯಾತು=ಕಳೆಯಲಿ ... ... .... ||೩೭||

ತಾ|| ಕನಸಿನ ಪದಾರ್ಥಗಳಂತೆ ವಿಘ್ನರೂಪವಾದ ಈ ಸಂಸಾರದಲ್ಲಿ ವಿವೇಕಿಗಳಾದವರು ತತ್ವಜ್ಞಾನವೆಂಬ [illegible] ಸಮುದ್ರದಲ್ಲಿ

ದಾಗಿ ಯಾದರೂ ಕಾಲವನ್ನು ಕಳೆಯುವರು. ಹಾಗಿಲ್ಲದೆ ಇಹಲೋಕ ಸುಖದಲ್ಲಿಯೆ ಆಸಕ್ತಿಯಿದ್ದರೆ ವಿವಿಧವಾದ ಸಂಭೋಗಗಳಲ್ಲಿ ಅಭಿಲಾಷೆಯುಳ್ಳತರುಣಿಯರ ಗುಹ್ಯಾದ್ಯವಯವಗಳಲ್ಲಿ ವಿಹರಿಸುತ್ತಲಾದರೂ ಕಾಲವನ್ನು ಕಳೆಯುವರು. ಯಾವದಾದರೊಂದು ಸುಖವನ್ನಾದರೂ ಚನ್ನಾಗಿ ಅನುಭವಿಸಬೇಕೆಂದು ಭಾವವು. .... .... ||೪೭||

ಶ್ಲೋ|| ಆವಾಸಃಕ್ರಿಯತಾಂಗಾಂಗೇಪಾಪಹಾರಿಣಿವಾರಿಣಿ || ಸ್ತನದ್ವಯೇ
ತರುಣ್ಯಾವಾಮನೋಹಾರಿಣಿಹಾರಿಣಿ .... ||೪೮||

ಟೀ|| ಪಾಪಹಾರಿಣಿ=ಪಾಪಹಾರಿಯಾಗಿ, ಗಾಂಗೆ=ಗಂಗಾಸಂಬಂಧವಾದ. ವಾರಿಣಿ=ಉದಕದಲ್ಲಿ, ಆವಾಸಃ=ನಿವಾಸವು, ಕ್ರಿಯತಾಂ=ಮಾಡಲ್ಪಡಲಿ, ತರುಣ್ಯಾಃ=ಯುವತಿಯರ, ಹಾರಿಣಿ=ಮುಕ್ತಾಹಾರವುಳ್ಳ, ಮನೋಹಾರಿಣಿ=ಮನೋಹರವಾದ, ಸ್ತನದ್ವಯೇವಾ=ಕುಚಯುಗ್ಮದಲ್ಲಿಯಾದರೂ, ಆವಾಸಃ=ವಾಸವು, ಕ್ರಿಯತಾಂ=ಮಾಡಲ್ಪಡಲಿ, ... ... ... ||೪೮||

ತಾ|| ಸಕಲ ಪಾಪಹಾರಿಯಾದ ದೇವಗಂಗೆಯೊಳು ಸ್ನಾನ ಮುಂತಾದವುಗಳನ್ನು ಮಾಡಿಕೊಂಡು ಆ ಗಂಗಾತೀರದಲ್ಲಿಯಾಗಲಿ, ಇಲ್ಲವೆ ಹರಿಣನಯನೆಯರಾದ ತರುಣಿಯರ ಕುಚಕುಂಭಗಳ ಸಂಭೋಗದಲ್ಲಿಯಾಗಲಿಆಸಕ್ತನಾಗಿ ವಾಸಮಾಡಿಕೊಂಡಿರಬೇಕಲ್ಲದೆ ಉಭಯ ಭ್ರಷ್ಟನಾಗಬಾರದು.

ಶ್ಲೋ|| ಕಿಮಿಹಬಹುಭಿರುಕ್ತೈರ್ಯುಕ್ತಿಶೂನ್ಯೈಃಪ್ರಲಾಪೈರ್ದ್ವಯಮಿಹ
ಪುರುಷಾಣಾಂಸರ್ವದಾಸೇವನೀಯಂ || ಅಭಿನವಮದಲೀಲಾಲಾ
ಲಸಂಸುಂದರೀಣಾಂಸ್ತನಭರಪರಿಖಿನ್ನಂಯೌವನಂವಾವನಂವಾ ||

ಟೀ|| ಇಹ=ಈವಿಷಯವಾಗಿ, ಬಹುಭಿಃ=ಅನೇಕವಾದ, ಯುಕ್ತಿಶೂನ್ಯೈಃ=ಉಪಾಯಹೀನವಾದ, ಪ್ರಲಾಪೈಃ=ನಿರರ್ಥಕವಾದ, ಉಕ್ತೈಃ=ಮಾತುಗಳಿಂದ, ಕಿಂ=ಫಲವೇನು ? ಅಭಿನವ=ಹೊಸದಾದ, ಮದಲೀಲಾ=ಮನ್ಮಥವಿಲಾಸಗಳಲ್ಲಿ, ಲಾಲಸಂ=ಆಸಕ್ತವಾದ, ಸ್ತನಭರ=ಕುಚಭಾರದಿಂದ, ಪರಿಖಿನ್ನ=ಶ್ರಾಂತವಾದ, ಸುಂದರೀಣಾಂ=ಭಾಮಿನಿಯರ, ಯೌವನಂವಾ=ಪ್ರಾಯವಾಗಲಿ, ವನಂವಾ=ಕಾಡಾಗಲೀ, ಇಹ=ಈಲೋಕದಲ್ಲಿ, ಪುರುಷಾಣಾಂ=ಮನುಷ್ಯರಿಗೆ, ಸರ್ವದಾ=ಯಾವಾಗಲೂ, ಸೇವನೀಯಂ=ಸೇವೆಗೆ ಯೋಗ್ಯವಾಗಿರುವದು. .... ||೪೯||

ತಾ|| ಯುಕ್ತಿಶೂನ್ಯಗಳಾಗಿಯೂ, ನಿರರ್ಥಕಗಳಾಗಿಯೂ ಇರುವಅನೇಕ ಮಾತುಗಳಿಂದೇನೂ ಪ್ರಯೋಜನವಿಲ್ಲವು. ಮತ್ತೇನೆಂದರೆ ಈ ಲೋ

ದಲ್ಲಿ ಮುಖ್ಯವಾಗಿ ಹೊಸಹೊಸದಾದ ಕಾಮವಿಕಾರಗಳಿಂದ ಸುಂದರವಾದ ಕಾಮಿನಿಯರ ಯೌವನವನ್ನಾದರೂ ಸೇವಿಸಬೇಕು, ಇಲ್ಲವೆ ವೈರಾಗ್ಯದಿಂದ ವನವನ್ನಾದರೂ ಹೊಂದಿ ತಪಸ್ಸನ್ನಾದರೂ ಅವಶ್ಯವಾಗಿ ಆಚರಿಸಬೇಕು ಉಭಯ ಭ್ರಷ್ಟರಾಗಬಾರದು. .... ॥೩೯॥

ಶ್ಲೋ॥ ಸತ್ಯಂಸದಾವಚ್ಮಿನಪಕ್ಷಪಾತಾಲ್ಲೋಕೇಷುಸಪ್ತಸ್ವಪಿತಥ್ಯಮೇತತ್ ॥ ನಾನ್ಯನ್ಮನೋಹಾರಿನಿತಂಬಿನೀಭ್ಯೋದುಃಖೈಕಹೇತುರ್ನಚಕಶ್ಚಿದನ್ಯಃ ॥ .... .... ॥೪೦॥

ಟೀ॥ ಸದಾ=ಯಾವಾಗಲೂ, ಸತ್ಯಂ=ನಿಜವನ್ನು. ವಚ್ಮಿ=ಹೇಳುವೆನು, ಪಕ್ಷಪಾತಾತ್=ವಂಚನೆಯಿಂದ, ನ=ಅಲ್ಲವು, ಸಪ್ತಸು=ಏಳಾದ, ಲೋಕೇಷ್ವಪಿ=ಲೋಕಗಳಲ್ಲಿಯೂ, ಏತತ್=ಈ ನಾನುಹೇಳುವದು, ತಥ್ಯಂ=ನಿಜವಾದದ್ದು. ನಿತಂಬಿನೀಭ್ಯಃ=ಕಾಮಿನಿಯರಿಗಿಂತಲೂ, ಅನ್ಯತ್=ಮತ್ತೊಂದು, ಮನೋಹಾರಿ=ಸುಂದರವಾದದ್ದು, ನ=ಅಲ್ಲವು, ಅನ್ಯಃ=ಇನ್ನೊಂದು, ದುಃಖ=ವ್ಯಥೆಗೆ, ಏಕ=ಮುಖ್ಯವಾದ, ಹೇತುಃ=ಕಾರಣವು, ಕಶ್ಚಿತ್=ಯಾವದೂ, ನ=ಇಲ್ಲವು, ॥೪೦॥

ತಾ॥ ಕಡೆಯದಾದ ಮತ್ತೊಂದು ಮಾತನ್ನು ಹೇಳುವೆನು. ಇದೇ ಮೂರು ಲೋಕದಲ್ಲಿಯೂ ಸತ್ಯವಾಗಿರುವದು. ಅದೇನೆಂದರೆ, ಲೋಕದಲ್ಲಿ ಸರ್ವಾಂಗಸುಂದರಿಯರಾದ ಕಾಮಿನಿಯರಿಗಿಂತಲೂ ಮತ್ತೊಂದು ಸುಂದರ ಪದಾರ್ಥವೂ ಇಲ್ಲವು ಅವರನ್ನು ವಿನಾ ಸಕಲ ದುಃಖಕಾರಣವಾದದ್ದು ಮತ್ತೊಂದಿಲ್ಲವು. ಸುಖದುಃಖಗಳೆರಡಕ್ಕೂ ಅವರೇ ಕಾರಣವೆಂದಾಶಯವು. .... .... .... ॥೪೦॥

---

## ಕಾಮಿನೀಗರ್ಹಣಾರಂಭವು.

ಶ್ಲೋ॥ ಕಾಂತೇತ್ಯುತ್ಪಲಲೋಚನೇತಿವಿಪುಲ ಶ್ರೋಣೀಭರೇತ್ಯುನ್ನಮತ್ಪೀನೋತ್ತುಂಗಪಯೋಧರೇತಿಸುಮುಖಾಂಭೋಜೇತಿಸುಭ್ರೂರಿತಿ ॥ ದೃಷ್ಟ್ವಾಮಾದ್ಯತಿಮೋದತೇಭಿರಮತೇಪ್ರಸ್ತೌತಿವಿದ್ವಾನಪಿ ಪ್ರತ್ಯಕ್ಷಾಶುಚಿಭಸ್ತ್ರಿಕಾಂಸ್ತ್ರಿಯಮಹೋ ಮೋಹಸ್ಯದುಶ್ಚೇಷ್ಟಿತಂ ॥ .... .... ॥೪೧॥

ಟೀ॥ ಕಾಮಿನಿಗಿಂತಲೂ ಮತ್ತೊಂದು ದುಃಖಕಾರಣವಿಲ್ಲವೆಂದು ಹೇಳಿದರ್ಥವ ಷ್ಟನ್ನು ವಿವರಿಸಲು ಕಾಮಿನೀ ನಿಂದೆಯನ್ನಾರಂಭಿಸುತ್ತಾನೆ—ವಿದ್ವಾನಪಿ=ಜ್ಞಾನವಂತನಾದವನೂ, ಪ್ರತ್ಯಕ್ಷ=ಕಣ್ಣೆದುರಿಗೆ, ಅಶುಚಿ=ಅಶುದ್ಧವಾದ, ಭಸ್ತ್ರಿಕಾಂ=ಚರ್ಮ ಚೀಲವಾಗಿರುವ, ಸ್ತ್ರಿಯಂ=ಹೆಂಗಸನ್ನು, ದೃಷ್ಟ್ವಾ=ನೋಡಿ. ಕಾಂತೇತಿ=ಮನೋಹರಳೆಂದು, ಉತ್ಪಲಲೋಚನೇತಿ=ನೈದಿಲೆಯಂತೆ ನಯನವುಳ್ಳವಳೆಂದು, ವಿಪುಲ=ವಿಶಾಲವಾದ, ಶ್ರೋಣೀನರೇತಿ=ನಿತಂಬ ಬಿಂಬವುಳ್ಳವಳೆಂದು, ಉನ್ನಮತ್=ಮೇಲ್ಭಾಗವನ್ನು ಹೊಂದುತಿರುವ, ಪೀನ=ಬಲಿತ, ಉತ್ತುಂಗ=ಉನ್ನತವಾದ, ಪಯೋಧರೇತಿ=ಕುಚಗಳುಳ್ಳವಳೆಂದು, ಸುಮುಖಾಂಭೋಜೇತಿ=ಸುಂದರ ವದನಾರವಿಂದವುಳ್ಳವಳೆಂದು, ಸುಭ್ರೂರಿತಿ=ಅಂದವಾದ ಕಣ್ಣುಹುಬ್ಬು ಉಳ್ಳವಳೆಂದೂ, ಮಾದ್ಯತಿ=ಮತ್ತನಾಗುವನು, ಮೋದತೇ=ಸಂತೋಷಿಸುವನು, ಅಭಿರಮತೇ=ಕ್ರೀಡಿಸುವನು ಪ್ರಸ್ತೌತಿ=ಸ್ತುತಿಸುವನು, ಅತಃ=ಆದಕಾರಣ, ಮೋಹಸ್ಯ=ಅಜ್ಞಾನದ, ದುಶ್ಚೇಷ್ಟಿತಂ=ದುರ್ವ್ಯಾಪಾರವು. ಅಹೋ=ಆಶ್ಚರ್ಯವು. ... ॥೪೧॥

ತಾ॥ ಅಶುದ್ಧವಾದ ಚರ್ಮದ ಚೀಲವೆಂದು ಪ್ರತ್ಯಕ್ಷವಾಗಿ ಕಾಣಬರುವ ಹೆಂಗಸನ್ನು ನೋಡಿ ಎಷ್ಟು ವಿವೇಕಶಾಲಿಯಾಗಿದ್ದರೂ ಆಹ! ಎಷ್ಟು ರಮಣೀಯಾಂಗಳಾಗಿರುವಳು ? . ನೈದಿಲೆಯಂತೆ ನಯನಗಳಿರುವವೆ. ಹಾ : ವಿಶಾಲವಾದ ನಿತಂಬ ಬಿಂಬವುಳ್ಳವಳಾಗಿರುವಳು !! ಅಹಹ ! ಕನಕಕುಂಭದಂತಿರುವ ಕುಚಭಾರದಿಂದ ಶೋಭಿಸುವಳು ; ಅಹೋ ಸುಂದರ ವದನಾರವಿಂದವುಳ್ಳವಳೆ; ಅಹ; ಕಾಮನ ಬಿಲ್ಲಿನಂತೆಸೆವ ಭ್ರೂವಲ್ಲಿಯುಳ್ಳವಳೇ! ಎಂದೀಮೇರಿಗೆಲ್ಲ ನರನು ಮತ್ತನಾಗುತ, ಸಂತೋಷಿಸುತ, ಕ್ರೀಡಿಸುತ, ಸ್ತೋತ್ರಮಾಡುತಲಿರುವನಲ್ಲಾ, ಅಜ್ಞಾನದ ವ್ಯಾಪಾರವು ಎಷ್ಟು ಆಶ್ಚರ್ಯಕರವಾಗಿದೆ, ಪ್ರಜ್ಞಾಶಾಲಿಯನ್ನೂ ಮೋಹಗೊಳಿಸುವದು. ॥೪೧॥

ಶ್ಲೋ॥ ಸ್ಮೃತಾಭವತಿತಾಪಾಯದೃಷ್ಟಾಚೋನ್ಮಾದಕಾರಿಣೀ ॥ ಸ್ಪೃಷ್ಟಾಭವತಿಮೋಹಾಯಸಾನಾಮದಯಿತಾಕಥಂ ॥ ॥೪೨॥

ಟೀ॥ ಸ್ತ್ರೀಸ್ವರೂಪವನ್ನು ದೂಷಿಸುತ್ತಾನೆ—ಯಾ-ಯಾವಸ್ತ್ರೀಯು, ಸ್ಮೃತಾ=ಸ್ಮರಿಸಲ್ಪಟ್ಟವಳಾಗಿ, ತಾಪಾಯ=ಸಂತಾಪಕ್ಕಾಗಿ, ಭವತಿ=ಆಗುವಳೊ, ದೃಷ್ಟಾ=ನೋಡಲ್ಪಟ್ಟವಳಾಗಿ, ಉನ್ಮಾದಕಾರಿಣೀ=ಚಿತ್ತಭ್ರಮಣವನ್ನುಂಟು ಮಾಡುವಳೊ, ಸ್ಪೃಷ್ಟಾ=ಆಲಿಂಗಿತಳಾಗಿ, ಮೋಹಾಯಭವತಿ=ಬಹಿಃಪ್ರಪಂಚವನ್ನು ಮರೆಸುವಳೊ, ಸಾ=ಆ ಸ್ತ್ರೀಯು, ಕಥಂನಾಮ=ಹೇಗೆ, ದಯಿತಾ=ಪ್ರಿಯತಮೆಯು, ಭವತಿ=ಆಗುವಳು. .... ... ... ... ॥೪೨॥

ತಾ॥ ದೇಶಾಂತರದಲ್ಲಿಯಾದರೂ ಅಂಗನೆಯನ್ನು ಸ್ಮರಿಸಿಕೊಂಡರೆ ಮಹಾವಿರಹತಾಪವನ್ನುಂಟುಮಾಡುವಳು, ನೋಡಿದ ಬಹನೆಯೇ ಚಿತ್ತವೈಕಲ್ಯವನ್ನುಂಟುಮಾಡುವಳು, ಹಾಗೆಯೇ ಆಲಿಂಗಿಸಿದರೆ ಈ ಪ್ರಪಂಚದ ಜ್ಞಾನವನ್ನೇ ತಪ್ಪಿಸಿ ಬಿಡುವಳು. ಇಂಥಾ ಅಂಗನೆಯು ಯಾವ ಬಗೆಯಿಂದ ಪ್ರಿಯಳಾಗುವಳು ? ಸರ್ವಥಾ ಆಗಲಾರಳು. ॥೪೨॥

ಶ್ಲೋ॥ ತಾವದೇವಾಮೃತಮಯೀಯಾವಲ್ಲೋಚನಗೋಚರಾ । ಚಕ್ಷು
ಷ್ಪಥಾದತೀತಾತುವಿಷಾದಪ್ಯತಿರಿಚ್ಯತೆ .... ॥೪೩॥

ಟೀ॥ ವಧೂಃ=ಕಾಂತೆಯು. ಯಾವತ್=ಎಷ್ಟರವರೆಗೂ, ಲೋಚನ=ಕಂಣುಗಳಿಗೆ, ಗೋಚರಾ=ವಿಷಯಳೋ, ತಾವದೇವ=ಅದುವರೆಗೇ, ಅಮೃತಮಯೀ=ಅಮೃತರಸಸದೃಶಳು, ಚಕ್ಷುಷ್ಪಥಾತ್=ನೇತ್ರಮಾರ್ಗದ್ವೆಸೆಯಿಂದ, ಅತೀತಾತು=ಅತಿಕ್ರಮಿಸಿದವಳೇ ಆದರೆ, ವಿಷಾದಪಿ=ವಿಷಕ್ಕಿಂತಲೂ, ಅತಿರಿಚ್ಯತೆ=ಅತಿರಿಕ್ತಳಾಗುವಳು. ... .... .... ॥೪೩॥

ತಾ॥ ಕಮನೀಯಳಾದ ಕಾಂತೆಯು ಕಂಣೆದುರಿಗಿರುವವರೆಗೂ ಅಮೃತರಸದಂತೆ ಪ್ರಿಯತಮೆಯಾಗಿರುವಳು. ಹಾಗಿಲ್ಲದೆ ಮರೆಯಾದರೆ ವಿಷಕ್ಕಿಂತಲೂ ಅಧಿಕವಾಗಿ ಪರಿಣಮಿಸುವಳು. ಎಂದರೆ ಸುದತಿಯೇ ಸುಖದುಃಖಗಳಿಗೆ ಕಾರಣವೆಂದಾಶಯವು. .... ॥೪೩॥

ಶ್ಲೋ॥ ನಾಮೃತಂನವಿಷಂಕಿಂಚಿದೇಕಾಂಮುಕ್ತ್ವಾನಿತಂಬಿನೀಂ।ಸೈವಾ
ಮೃತಲತಾರಕ್ತಾವಿರಕ್ತಾವಿಷವಲ್ಲರೀ .... ॥೪೪॥

ಟೀ॥ ಹೇಳಿದರ್ಥವನ್ನು ಬೇರೆ ರೀತಿಯಿಂದ ಪೇಳುತ್ತಾನೆ—ಏಕಾಂ=ಒಬ್ಬಳಾದ, ನಿತಂಬಿನೀಂ=ಕಾಮಿನಿಯನ್ನು, ಮುಕ್ತ್ವಾ=ಬಿಟ್ಟು, ಅಮೃತಂ=ಅಮೃತಶಬ್ದಾರ್ಥವು, ಕಿಂಚಿತ್=ಮತ್ತೊಂದು ವಸ್ತುವು, ನಾಸ್ತಿ=ಇಲ್ಲವು, ವಿಷಂ=ವಿಷಪದಾರ್ಥವು, ಕಿಂಚಿತ್=ಮತ್ತೊಂದು, ನ=ಇಲ್ಲವು, ಸೈವ=ಆ ಕಾಮಿನಿಯೆ, ರಕ್ತಾ=ಅನುರಕ್ತಳಾಗಿದ್ದರೆ, ಅಮೃತ=ಅಮೃತ ರಸದಿಂದ ಕೂಡಿದ, ಲತಾ=ಲತೆಯು. ವಿರಕ್ತಾ=ಅನುರಾಗಶೂನ್ಯಳಾದರೆ, ವಿಷವಲ್ಲರೀ=ವಿಷದ ಬಳ್ಳಿಯು, ॥೪೪॥

ತಾ॥ ಅಂಗನೆಯು ಅನುರಾಗವುಳ್ಳವಳಾಗಿದ್ದರೆ ಅಮೃತದಂತೆ ಅತ್ಯಂತ ಪ್ರಿಯಳಾಗಿರುವಳು; ಅನುರಾಗಶೂನ್ಯಳಾದರೆ ವಿಷದಂತೆ ಪ್ರಾಣಾಪಹಾರಿಯಾಗುವಳು. ಆದಕಾರಣವೆ ಕಾಮಿನಿಯನ್ನು ಬಿಟ್ಟು ಬೇರೆ ಪ್ರಿಯ ವಸ್ತುವೂ ಅಪ್ರಿಯವಾದ ವಸ್ತುವೂ ಇಲ್ಲವೆಂದಾಶಯವು ॥೪೪॥

ಶ್ಲೋ॥ ಆವರ್ತಸ್ಸಂಶಯಾನಾಮವಿನಯಭುವನಂಪಟ್ಟಣಂಸಾಹಸಾನಾಂ
ದೋಷಾಣಾಂ ಸನ್ನಿಧಾನಂಕಪಟಶತಮಯಂ ಕ್ಷೇತ್ರಮಪ್ರತ್ಯ
ಯಾನಾಂ ॥ ಸ್ವರ್ಗದ್ವಾರಸ್ಯವಿಘ್ನೋನರಕಪುರಮುಖಂಸರ್ವ
ಮಾಯಾಕರಂಡಂಸ್ತ್ರೀಯಂತ್ರಂಕೇನಸೃಷ್ಟಂವಿಷಮಮೃತಮ
ಯಂಪ್ರಾಣಿಲೋಕಸ್ಯಪಾಶಃ .... ॥೪೫॥

ಟೀ॥ ಸ್ತ್ರೀಯನ್ನು ಸೃಷ್ಟಿಸಿದವನನ್ನು ದೂಷಿಸುತ್ತಾನೆ—ಸಂಶಯಾನಾಂ=ಸಂದೇಹಗಳಿಗೆ, ಆವರ್ತಃ=ಪರಿಪಾಕವು, ಅವಿನಯಾನಾಂ=ಅವಿಧೇಯತೆಗಳಿಗೆ ಭುವನಂ=ಲೋಕವು, ಸಾಹಸಾನಾಂ=ಸಾಮರ್ಥ್ಯಗಳಿಗೆ, ಪಟ್ಟಣಂ=ನಗರವು, ದೋಷಾಣಾಂ=ರಾಗದ್ವೇಷಾದಿ ದೋಷಗಳಿಗೆ, ಸನ್ನಿಧಿಃ=ಉತ್ತಮವಾದ ನಿಕ್ಷೇಪವು, ಕಪಟ=ಕೃತ್ರಿಮಗಳ, ಶತ=ನೂರುಗಳ, ಮಯಂ=ಸ್ವರೂಪವು, ಅಪ್ರತ್ಯಯಾನಾಂ=ಅವಿಶ್ವಾಸಗಳಿಗೆ, ಕ್ಷೇತ್ರಂ=ಉತ್ಪತ್ತಿ ಭೂಮಿಯು, ಸ್ವರ್ಗದ್ವಾರಸ್ಯ=ಸ್ವರ್ಗದ ಬಾಗಿಲಿಗೆ, ವಿಘ್ನಃ=ಪ್ರತಿಬಂಧಕವು, ನರಕಪುರಮುಖಂ=ಯಮಲೋಕ ದ್ವಾರವು, ಸರ್ವ=ಸಮಸ್ತವಾದ, ಮಾಯಾ=ಇಂದ್ರಜಾಲ ವಿದ್ಯೆಗಳ, ಕರಂಡಂ ಪೆಟ್ಟಿಗೆಯು, ವಿಷಂ=ವಿಷಸ್ವರೂಪವು, ಅಮೃತಂ=ಅಮೃತಪ್ರಾಯವು, ಪ್ರಾಣಿಲೋಕಸ್ಯ=ಪ್ರಾಣಿವರ್ಗಕ್ಕೆ, ಪಾಶಃ=ಬಂಧನಸ್ವರೂಪವೂ ಆದ, ಸ್ತ್ರೀಯಂತ್ರಂ=ಕಾಮಿನೀರೂಪವಾದ ಯಂತ್ರವು, ಕೇನ=ಯಾರಿಂದ. ಸೃಷ್ಟಂ=ನಿರಿಸಲ್ಪಟ್ಟಿತು ? ॥೪೫॥

ತಾ॥ ಸಕಲ ಸಂಶಯಗಳಗಾಕರವಾಗಿ, ಅವಿನಯಗಳಗೆ ಆಧಾರವೆಂದೆನಿಸಿ, ಸಮಸ್ತವಾದ ಸಾಹಸಗಳಗೆ ಗಣಿಯಾಗಿ, ರಾಗದ್ವೇಷಾದಿ ದೋಷಗಳ ನಿಕ್ಷೇಪವೆಂದೆನಿಸಿ, ಅನೇಕ ಕೃತ್ರಿಮಗಳಗೆ ಜನ್ಮಭೂಮಿಯಾಗಿ, ಅಪನಂಬಿಕೆಗಳ ಮನೆಯಾಗಿ, ಸ್ವರ್ಗಪ್ರಾಪ್ತಿ ಸಾಧನವನ್ನು ಹಾಳುಮಾಡುತ, ನರಕಪ್ರಾಪ್ತಿಗೆ ಮುಖ್ಯಕಾರಣವಾಗಿ, ಎಲ್ಲಾ ಇಾದ್ರಜಾಲವಿದ್ಯೆಗಳಗೂ ಗುರುವಾಗಿ, ನೋಡುತ್ತಲೇ ಅಮೃತಮಯವಾಗಿ, ವಿಚಾರ ಮಾಡಲು ವಿಷಪುಂಜವಾಗಿ, ಪ್ರಾಣಿವರ್ಗಕ್ಕೆ ಬಂಧನಪಾಶವಾಗಿಯೂ ಇರುವ ಈ ಸ್ತ್ರೀಯಂತ್ರವನ್ನು ಯಾವನು ಸೃಷ್ಟಿಸಿದನೋ ಅವನ ಸಾಮರ್ಥ್ಯವು ಬಹು ಶ್ಲಾಘ್ಯವಾದದ್ದು. ಅಥವಾ ಇಂಥ ಬಹು ದುಷ್ಟ ವಸ್ತುವನ್ನು ನಿರ್ಮಿಸಿದನಾದ ಕಾರಣ ಅವನ ನಾಮೋಚ್ಚಾರಣವೂ ಪಾಪಹೇತುವೆಂದು ಭಾವವು. .... .... ॥೪೫॥

ಶ್ಲೋ॥ ನೋಸತ್ಯೇನಮೃಗಾಂಕಏಷವದನೀಭೂತೋನಚೇಂದೀವರದ್ವಂ
ದ್ವಂಲೋಚನತಾಂಗತಂನಕನಕೈರಪ್ಯಂಗಯಷ್ಟಿಃಕೃತಾ ॥ ಕಿಂ

ತ್ವೇವಂಕವಿಭಿಃಪ್ರತಾರಿತಮನಾಸ್ತತ್ತ್ವಂ ವಿಜಾನನ್ನಪಿತ್ವಙ್ಮಾಂಸಾ
ಸ್ಥಿಮಯಂವಪುರ್ಮೃಗದೃಶಾಂಮಂದೋಜನಸ್ಸೇವತೆ ॥೪೯॥

ಟೀ॥ ಅನರ್ಥಗಳಿಗೆ ಕಾರಣವಾಗಿರುವ ಅಂಗಯನೆಯನ್ನು ಕವಿಗಳ ವಾಗ್ವೈಖರಿಯಿಂದ ವಂಚಿತನಾದ ಮೂಢನು ಭ್ರಾಂತನಾಗುವನೆಂದು ಹೇಳುತ್ತಾನೆ— ಏಷಃ= ಈ ಕಾಣುಬರುವ, ಮೃಗಾಂಕಃ=ಚಂದ್ರನು, ಸತ್ಯೇನ=ನಿಜದಿಂದ, ವದನೀಭೂತಃ= ಮುಖವಾಗಿ ಪರಿಣಮಿಸಿರುವವನು, ನ=ಅಲ್ಲ, ಇಂದೀವರ=ಕನ್ನೈದಿಲೆಗಳ, ದ್ವಂದ್ವಂ=ಯುಗ್ಮವು, ಲೋಚನತಾಂ=ನೇತ್ರಭಾವವನ್ನು, ನಗತಂ=ಹೊಂದಿ ಇಲ್ಲ, ಕನಕೈಃ=ಸುವರ್ಣಗಳಿಂದ, ಅಂಗಯಷ್ಟಿರಪಿ=ದಂಡಾಕಾರವಾಗಿರುವ ದೇಹವೂ, ನಕೃತಾ=ಮಾಡಲ್ಪಡಲಿಲ್ಲ, ಕಿಂತು=ಮತ್ತೇನೆಂದರೆ, ಏವಂ=ಈ ಪ್ರಕಾರವಾಗಿ, ಕವಿಭಿಃ=ಕವಿಗಳಿಂದ. ಪ್ರತಾರಿತ=ವಂಚಿಸಲ್ಪಟ್ಟ, ಮನಾಃ=ಮನಸ್ಸುಳ್ಳವನಾಗಿ ಮೂಢಃ=ಮೂಢನಾದ, ಜನಃ=ಜನವು, ತತ್ವಂ=ನಿಜವನ್ನು, ವಿಜಾನನ್ನಪಿ=ತಿಳಿದವನಾದಲೂ, ಮೃಗದೃಶಾಂ=ಹರಿಣನಯನೆಯರ, ತ್ವಕ್=ತೊಗಲು, ಮಾಂಸ= ಮಾಂಸವು, ಅಸ್ಥಿ=ಮೂಳೆಯು, ಮಯಂ=ಇವುಗಳ ವಿಕಾರವಾದ, ವಪುಃ=ಶರೀರವನ್ನು, ಸೇವತೆ=ಸೇವಿಸುವನು. ... ॥೪೯॥

ತಾ॥ ಪ್ರಮಾಣವಾಗಿಯೂ ಮುಖವು ಚಂದ್ರನಲ್ಲ, ಚಂದ್ರನಂತೆಯೂ ಇಲ್ಲ, ಕಂಣು ಕನ್ನೈದಿಲೆಯಲ್ಲ, ಮತ್ತು ನೈದಿಲೆಯಂತೆಯೂ ಇಲ್ಲ. ಶರೀರವೂ ಭಂಗಾರದಿಂದ ಮಾಡಿಲ್ಲ, ಭಂಗಾರದಂತೆಯೂ ಇಲ್ಲ, ರಕ್ತ, ಮಾಂಸ, ಕೊಬ್ಬು, ಮೂಳೆ, ನರ ಮೊದಲಾದವುಗಳಿಂದ ಮಾಡಲ್ಪಟ್ಟು, ಅಸಹ್ಯಕರವಾಗಿದ್ದರೂ ಅನ್ಯಾಯವಾಗಿ ಕವಿಗಳು ನಾನಾ ಬಗೆಯಾಗಿ ವರ್ಣಿಸಿರುವ ದೇಹವನ್ನು ನೋಡಿ ನಿಜಸ್ಥಿತಿಯನ್ನು ತಿಳಿದಿದ್ದರೂ ಭ್ರಾಂತರಾಗಿ ಜನರು ಸ್ತ್ರೀಸಹವಾಸದೊಳಾಸಕ್ತರಾಗುವರು. ವಿವೇಕಿಯಾದವನು ಹಾಗೆ ಕೆಡಲಾರನೆಂದಭಿಪ್ರಾಯವು. .... ॥೪೯॥

ಶ್ಲೋ॥ ಲೀಲಾವತೀನಾಂಸಹಜಾವಿಲಾಸಾಸ್ತ ಏವಮೂಢಸ್ಯಹೃದಿಸ್ಫುರಂತಿ॥
ರಾಗೋನಳಿನ್ಯಾಹಿನಿಸರ್ಗಸಿದ್ಧಸ್ತತ್ರಭ್ರಮತ್ಯೇವವೃಥಾಷಡಂಘ್ರಿಃ

ಟೀ॥ ಜನರಿಗುಂಟಾಗುವ ಭ್ರಾಂತಿಯನ್ನು ಸದೃಷ್ಟಾಂತವಾಗಿ ತೋರಿಸುತ್ತಾನೆ—ಲೀಲಾವತೀನಾಂ=ವಿಲಾಸಿನಿಯರಿಗೆ, ವಿಲಾಸಾಃ=ವಿಭ್ರಮಗಳು, ಸಹಜಾಃ= ಸ್ವಾಭಾವಿಕಗಳು, ತಏವ=ಆ ವಿಲಾಸಗಳೇ, ಮೂಢಸ್ಯ=ಅವಿವೇಕಿಯ, ಹೃದಿ=ಮನಸ್ಸಿನಲ್ಲಿ, ಸ್ಫುರಂತಿ=ಹೊಳೆಯುವವು. ನಳಿನ್ಯಾಃ=ಕಮಲ ಲತೆಗೆ, ರಾಗಃ=ಕೆಂಪು, ನಿಸರ್ಗಸಿದ್ಧಃ=ಸ್ವಭಾವಸಿದ್ಧವಾದದ್ದು, ಷಡಂಘ್ರಿಃ—ಭ್ರಮರವು, ತತ್ರ=ಆ ಕಮಲ ಲತೆಯಲ್ಲಿ, ವೃಥಾ=ವ್ಯರ್ಥವಾಗಿ, ಭ್ರಮತಿ=ಭ್ರಮಿಸುವದು. ... ॥೫೦॥

ತಾ॥ ಕಮಲಲತೆಯು ಕೆಂಪಾಗಿರುವದು ಸಹಜವಾಗಿದ್ದರೂ ದುಂಬಿಯು ಹೇಗೆ ಭ್ರಾಂತಿಯಿಂದ ಅದರಲ್ಲಿ ಹೋಗಿ ಭ್ರಮಿಸುವದೊ, ಅದರಂತೆ ಲೋಕದೊಳು ಕಾಮಿನಿಯರಿಗೆ ವಿವಿಧವಾದ ವಿಲಾಸಗಳು ಸ್ವಭಾವಸಿದ್ಧವಾಗಿದ್ದರೂ ಮೂಢನು ಆ ವಿಲಾಸಗಳನ್ನು ನೋಡಿ ಭ್ರಾಂತನಾಗಿ ಮೋಹಹೊಂದುವನು. ವಿವೇಕಿಯು ಹಾಗೆ ಭ್ರಷ್ಟನಾಗುವದಿಲ್ಲವೆಂದಾಶಯವು.

ಶ್ಲೋ॥ ಯದೇತತ್ಪೂರ್ಣೇಂದುದ್ಯುತಿ ಹರಮುದಾರಾಕೃತಿಪರಂ ಮುಖಾ
ಬ್ಜಂತನ್ವಂಗ್ಯಾಃಕಿಲವಸತಿಯತ್ರಾಧರಮಧು ॥ ಇದಂತತ್ಕಿಂಪಾ
ಕದ್ರುಮಫಲಮಿದಾನೀಮತಿರಸಂವ್ಯತೀತೇಸ್ಮಿನ್ಕಾಲೇವಿಷಮಿವಭ
ವಿಷ್ಯತ್ಯಸುಖದಂ .... .... ॥೪೮॥

ಟೀ॥ ರಮಣೀ ಮುಖವಿಲೋಕನ ಮಾತ್ರದಿಂದ ಮೋಹ ಪಡಬಾರದೆಂದು ಪೇಳುತ್ತಾನೆ—ಯದೇತತ್=ಯಾವ ಈ, ತನ್ವಂಗ್ಯಾಃ=ಕೃಶಾಂಗಿಯ, ಮುಖಾಬ್ಜಂ=ಮುಖಕಮಲವು, ಪೂರ್ಣೇಂದು=ಪೂರ್ಣಚಂದ್ರನ, ದ್ಯುತಿ=ಕಾಂತಿಯನ್ನು, ಹರಂ=ಅಪಹರಿಸುವದು, ಪರಂ=ಅತ್ಯಂತವಾಗಿ, ಉದಾರ=ಉತ್ಕೃಷ್ಟವಾದ, ಆಕೃತಿ=ಆಕಾರವುಳ್ಳದ್ದು, ಯತ್ರ=ಯಾವ ಮುಖಕಮಲದಲ್ಲಿ, ಅಧರಮಧು=ಅಧರೋಷ್ಠ ಸಂಬಂಧವಾದ ಮಕರಂದವು, ಅಸ್ತಿ ಕಿಲ=ಉಂಟೋ, ತದಿದಂ=ಆ ಈ ಮುಖಕಮಲವು, ಇದಾನೀಂ=ಈಗ, ಅತಿರಸಂ=ಅತಿಶಯವಾದ ಮಾಧುರ್ಯವುಳ್ಳದ್ದು, ಕಿಂಪಾಕದ್ರುಮ=ಕಿಂಪಾಕವೆಂಬ ವೃಕ್ಷ ವಿಶೇಷದ, ಫಲಂ=ಫಲಸದೃಶವಾದದ್ದು, ಅಸ್ಮಿನ್ ಕಾಲೆ=ಈ ಕಾಲವು, ಅತಿಕ್ರಾಂತೆ=ಅತಿಕ್ರಮಿಸಿ ಹೋಗುತ್ತಿರಲಾಗಿ, ವಿಷಮಿವ=ವಿಷದಂತೆ, ಅಸುಖದಂ=ದುಃಖಪ್ರದವಾದದ್ದು, ಭವಿಷ್ಯತಿ=ಆಗುವದು. ॥೪೮॥

ತಾ॥ ಕಾಮಿನಿಯರ ಮುಖಕಮಲವು ಪೂರ್ಣಚಂದ್ರನಿಗಿಮ್ಮಡಿಯಾಗಿರುವದು, ಮತ್ತು ಗಂಭೀರವಾದ ಸೌಂದರ್ಯದಿಂದ ಶೋಭಿಸುವದು. ಮತ್ತು ಈ ಸುಂದರವಾದ ವದನದೊಳಿರುವ ಅಧರದೊಳು ಮಧುರಸವು ನೆಲೆಗೊಂಡಿರುವದೂ ಆಗಿ, ಪ್ರಕೃತಕಾಲದಲ್ಲಿ ತೋರುತಿದ್ದರೂ ಸ್ವಲ್ಪಕಾಲ ಕಳೆಯಲುತರುವಾಯ ದೋಷಭರಿತವಾಗಿರುವದರಿಂದಹಾಲಾಹಲದಂತೆ ದುಃಖಕರವಾಗುವದು. ಆದ್ದರಿಂದಲೆ ವಿಚಾರಮಾಡದೆ ಭ್ರಾಂತನಾಗಿ ಮೋಹವನ್ನು ಹೊಂದಬಾರದೆಂದು ತಾತ್ಪರ್ಯವು. ॥೪೮॥

ಶ್ಲೋ॥ ಉನ್ಮೀಲತ್ತ್ರಿವಳೀತರಂಗನಿಲಯಾಪ್ರೋತ್ತುಂಗಪೀನಸ್ತನದ್ವಂ
ದ್ವೇನೋದ್ಗತಚಕ್ರವಾಕಯುಗಳಾವಕ್ತ್ರಾಂಬುಜೋದ್ಭಾಸಿನೀ ॥

ಕಾಂತಾಕಾರಧರಾನದೀಯಮಭಿತಃ ಕ್ರೂರಾತ್ರನಾಪೇಕ್ಷತೆಸಂ
ಸಾರಾರ್ಣವಮಜ್ಜನಂಯದಿತದಾದೂರೇಣಸಂತ್ಯಜ್ಯತಾಂ ॥೪೯॥

ಟೀ॥ ಉನ್ಮೀಲತ್=ಉಂಟಾದ, ತ್ರಿವಳೀ=ವಳಿತ್ರಯವೆಂಬ, ತರಂಗ=ಅಲೆಗಳಿಗೆ, ನಿಲಯಾ=ಆಧಾರವಾದ, ಪ್ರೋತ್ತುಂಗ=ಉನ್ನತವಾದ, ಪೀನ=ಬಲಿತ ಸ್ತನದ್ವಂದ್ವೇನ=ಕುಚಯುಗ್ಮದಿಂದ, ಉದ್ಗತ=ಮೇಲಕ್ಕೆ ಹೊರಟು ಬರುವ,ಚಕ್ರವಾಕ=ಚಕ್ರವಾಕಪಕ್ಷಿಗಳ, ಯುಗಳಾ=ಯುಗ್ಮವುಳ್ಳ ವಕ್ತ್ರ=ಮುಖವೆಂಬ,ಅಂಬುಜ=ಕಮಲದಿಂದ, ಉದ್ಭಾಸಿನೀ=ಹೊಳೆಯುವ, ಅಭಿತಃ=ಸರ್ವತ್ರ, ಕ್ರೂರಾ=ಕ್ರೂರ ಜಂತುಗಳುಳ್ಳ, (ಕುಟಿಲಹೃದಯವುಳ್ಳ) ಕಾಂತಾಕಾರಧರಾ=ಸ್ತ್ರೀರೂಪಧಾರಿಯಾದ, ಇಯಂನದೀ=ಈ ನದಿಯು, ಅತ್ರ=ಈ ಲೋಕದಲ್ಲಿ, ಸಂಸಾರಾರ್ಣವಮಜ್ಜನಂ=ಸಂಸಾರವೆಂಬ ಸಮುದ್ರದೊಳು ಮುಳುಗುವಿಕೆಯನ್ನು, ನಾಪೇಕ್ಷತೆಯದಿ=ಅಪೇಕ್ಷಿಸದೆ ಹೋದರೆ, ತದಾ=ಆಗ, ದೂರೇಣ=ದೂರವಾಗಿ, ಸಂತ್ಯಜ್ಯತಾಂ=ಬಿಡಲ್ಪಡಲಿ. .... .... ... ॥೪೯॥

ತಾ॥ ವಳಿಗಳೆಂಬ ಅಲೆಗಳುಂಟಾಗಿ, ಕುಚಕುಂಭಗಳೆಂಬ ಚಕ್ರವಾಕಗಳಿಂದ ಶೋಭಿಸುತ್ತ, ಮುಖವೆಂಬ ತಾವರೆಯಿಂದ ಹೊಳೆಯುತ್ತಲೂ, ಸರ್ವತ್ರ ಕ್ರೂರವಾಗಿಯೂ ಇರುವದರಿಂದಲೇ ಕಾಂತೆಯು ಮಹಾನದಿಯ ಆಕಾರದಿಂದ ಶೋಭಿಸುವಳು. ಈ ನದಿಯನ್ನು ಆಶ್ರಯಿಸಿದರೆ ಸಮುದ್ರದಲ್ಲಿ ಹಾಕಿ ಮುಣಿಗಿಸುವದು. ಎಂದರೆ, ತರುಣಿಯನ್ನಾಶ್ರಯಿಸಿದರೆ ಜನನಮರಣ ಪ್ರವಾಹರೂಪವಾದ ಸಂಸಾರ ಸಾಗರದೊಳು ಮುಳುಗಬೇಕಾಗುವದು. ಆದ್ದರಿಂದ ಮುಣಗಿ ಹೋಗಲು ಅಭಿಲಾಷೆ ಇಲ್ಲದಿರುವವರು. ಈ ಕಾಮಿಯನ್ನು ದೂರವಾಗಿ ಬಿಡಬೇಕೆಂದು ಭಾವವು ॥೪೯॥

ಶ್ಲೋ॥ ಜಲ್ಪಂತಿಸಾರ್ಧಮನ್ಯೇನಪಶ್ಯಂತ್ಯನ್ಯಂಸವಿಭ್ರಮಾಃ ॥ ಹೃದಯೇ
ಚಿಂತಯಂತ್ಯನ್ಯಂಪ್ರಿಯಃಕೋನಾಮಯೋಷಿತಾಂ ॥೫೦॥

ಟೀ॥ ಈ ಕಾರಣದಿಂದಲೂ ಅಂಗನೆಯರು ವಿಶ್ವಾಸಾನರ್ಹರೆಂದು ಹೇಳುತ್ತಾ,

ನೆ॥ ಅನ್ಯೇನಸಾರ್ಧಂ=ಒಬ್ಬನೊಡನೆ, ಜಲ್ಪಂತಿ=ಮಾತನಾಡುವರು, ಅನ್ಯಂ=ಮತ್ತೊಬ್ಬನನ್ನು, ಸವಿಭ್ರಮಾಃ=ವಿಲಾಸವತಿಯರಾಗಿ, ಪಶ್ಯಂತಿ=ನೋಡುವರು, ಹೃದಯೇ=ಮನಸ್ಸಿನಲ್ಲಿ, ಅನ್ಯಂ=ಇನ್ನೊಬ್ಬನನ್ನು, ಚಿಂತಯಂತಿ=ಧ್ಯಾನಿಸುವರು ಯೋಷಿತಾಂ=ಸ್ತ್ರೀಯರಿಗೆ, ಪ್ರಿಯಃ=ಇಷ್ಟನು, ಕೋನಾಮ=ಯಾವನು? ॥೫೦॥

ತಾ॥ ಲೋಕದಲ್ಲಿ ಕಾಮಿನಿಯರು ಒಬ್ಬನೊಡನೆ ಮಾತನಾಡುತ್ತಾ, ವಿಲಾಸಗಳಿಂದ ಮತ್ತೊಬ್ಬನನ್ನು ನೋಡುತ್ತ, ಹೃದಯದಲ್ಲಿ ಇನ್ನೊಬ್ಬ

ನನ್ನು ಧ್ಯಾನಿಸುತ್ತಲೂ ಇರುವರು. ಇಷ್ಟು ಕ್ರೂರವು ಸ್ವಭಾವದಿಂದ ಕೂಡಿರುವ ಕಾಂತೆಗೆ ಯಾವನು ತಾನೆ ಇಷ್ಟನಾದಾನು? ಆದ್ದರಿಂದಲೆ ಇವರು ವಿಶ್ವಾಸಾನರ್ಹರೆಂದಾಶಯವು .... ॥೫೪॥

ಶ್ಲೋ॥ ಅಪಸರಸಖೇದೂರಾದಸ್ಮಾತ್ಕಟಾಕ್ಷವಿಷಾನಲಾತ್ಪ್ರಕೃತಿ ವಿಷಮಾ
ದ್ಯೋಷಿತ್ಸರ್ಪಾದ್ವಿಲಾಸಫಣಾಭೃತಃ ॥ ಇತರಫಣಿನಾದಷ್ಟಶ್ಶಕ್ಯ
ಶ್ಚಿಕಿತ್ಸಿತು ಮೌಷಧೈಶ್ಚತುರವನಿತಾ ಭೋಗಿಗ್ರಸ್ತಂತ್ಯಜಂತಿಹಿ
ಮಂತ್ರಿಣಃ .... .... ॥೫೫॥

ಟೀ॥ ಹರಿಣಾಕ್ಷಿಯು ಹಾವೆಂದು ಭಯಪಡಿಸಿ ಮಿತ್ರನನ್ನು ದೂರವಾಗಿ ಬಾ ಕೆಂದುಪದೇಶಿಸುತ್ತಾನೆ. ಹೇಸಖೆ=ಎಲೈಮಿತ್ರನೆ, ಕಟಾಕ್ಷ=ಕಡೆಗಣ್ಣನೋಟವೆಂಬ, ವಿಷಾನಲಾತ್=ವಿಷಾಗ್ನಿಯುಳ್ಳಂತಿರುವ ಪ್ರಕೃತಿವಿಷಮಾತ್=ಸ್ವಭಾವದಿಂದ ವಕ್ರವಾದ, ವಿಲಾಸ=ವಿಭ್ರಮಗಳೆಂಬ,ಫಣಾ=ಹೆಡೆಯನ್ನು, ಭೃತಃ=ಧರಿಸಿರುವ, ಅಸ್ಮಾತ್=ಈ ಕಾಣಬರುವ, ಯೋಷಿತ್ಸರ್ಪಾತ್=ಅಂಗನೆ ಎಂಬ ಹಾವಿನ ದೆಸೆಯಿಂದ, ಅಪಸರ=ಹಿಂದಕ್ಕೆ ಹೋಗು, ಇತರ=ಲೋಕಪ್ರಸಿದ್ಧವಾದ, ಫಣಿನಾ=ಸರ್ಪದಿಂದ, ದಷ್ಟಃ=ಕಚ್ಚಲ್ಪಟ್ಟವನೇ ಆದರೆ, ಔಷಧೈಃ=ಮದ್ದುಗಳಿಂದ, ಚಿಕಿತ್ಸಿತುಂ=ಪ್ರತಿಕ್ರಿಯೆ, ಮಾಡುವದಕ್ಕೆ ಶಕ್ಯಃ=ಸಾಧ್ಯವು, ಚತುರ=ನಿಪುಣವಾದದ್ದು, ವನಿತಾ=ಅಂಗನೆಯೆಂಬ, ಭೋಗಿ=ಸರ್ಪದಿಂದ, ಗ್ರಸ್ತಂ=ಆಕ್ರಮಿಸಲ್ಪಟ್ಟವನನ್ನು (ಕಚ್ಚಲ್ಪಟ್ಟವನನ್ನು) ಮಂತ್ರಿಣಃ=ವಿಷವೈದ್ಯರು, ತ್ಯಜಂತಿಹಿ=ಬಿಡುವರಷ್ಟೆ ॥೫೫॥

ತಾ॥ ಎಲೈ ಸ್ನೇಹಿತನೇ! ಕಟಾಕ್ಷವೆಂಬ ವಿಷಜ್ವಾಲೆಯುಂಟಾಗಿ, ನಾನಾವಿಧವಾದ ವಿಲಾಸಗಳೆಂಬ ಹೆಡೆಯನ್ನು ಧರಿಸಿ, ಸ್ವಭಾವದಿಂದಲೆ ಅತ್ಯಂತ ಕ್ರೂರವಾಗಿರುವ ತರುಣಿಯೆಂಬ ಸರ್ಪವನ್ನು ತ್ಯಜಿಸಿ ದೂರವಾಗಿ ಜಾಗ್ರತೆಯಿಂದ ಹೊರಟುಬಾ? ಏಕೆಂದರೆ, ಲೋಕದೊಳು ರೂಢವಾಗಿರುವ ಹಾವು ಕಚ್ಚಿದರೆ ಯಾವದಾದರೊಂದು ಔಷಧವನ್ನು ಹಾಕಿ ಆ ವಿಷವನ್ನು ಹೇಗಾದರೂ ಇಳಿಸಬಹುದು, ಒಂದುವೇಳೆ ಈ ಹೆಣ್ಣೆಂಬ ಹಾವಿನ ಕೈಗೆಸಿಕ್ಕಿ ಅದೇನಾದರೂ ಕಚ್ಚಿದ್ದೇ ಆದರೆ ಎಷ್ಟು ಶೂರನಾದ ವಿಷವೈದ್ಯನಾದರೂ ಆ ವಿಷವನ್ನಿಳಿಸಲು ಕೈಲಾಗದೆಂದು ದೂರವಾಗಿ ಕೈಬಿಟ್ಟು ಹೊರಟುಹೋಗುವನು, ಎಂದರೆ ಸರ್ಪಕ್ಕಿಂತಲೂ ಕ್ರೂರವಾಗಿರುವದರಿಂದಲೇ ತರುಣಿಯನ್ನು ದೂರವಾಗಿ ತ್ಯಜಿಸಬೇಕೆಂದಭಿಪ್ರಾಯವು ॥೫೫॥

ಶ್ಲೋ॥ ಕಾಮಿನೀಕಾಯಕಾಂತಾರೇ ಕುಚಪರ್ವತದುರ್ಗಮೇ ॥ ಮಾಸಂಚರ

ರಮನಃಪಾಂಥತತ್ರಾಸ್ತೇಸ್ಮರತಸ್ಕರಃ .... ||೫೭||

ಟೀ|| ಇನ್ನು ಮನಸ್ಸನ್ನು ಭಯಪಡಿಸುತ್ತಾನೆ, ಹೇಮನಃಪಾಂಥ=ಎಲೈ ಮನಸ್ಸೆಂಬ ಮಾರ್ಗಸ್ಥನೇ, ಕುಚ=ಸ್ತನಗಳೆಂಬ, ಪರ್ವತ=ಬೆಟ್ಟಗಳಿಂದ, ದುರ್ಗಮ=ಗಹನವಾದ, ಕಾಮಿನೀ=ತರುಣಿಯ, ಕಾಯ=ಶರೀರವೆಂಬ, ಕಾಂತಾರೇ=ಅಡವಿಯಲ್ಲಿ, ಸ್ಮರತಸ್ಕರಃ=ಕಾಮನೆಂಬ ಚೋರನು, ಆಸ್ತೇ=ಇರುವನು, ತತ್ರ=ಅಲ್ಲಿ. ಮಾಸಂಚರ=ತಿರುಗಬೇಡ ... .... ... ||೫೭||

ತಾ|| ಎಲೈ ಮನಸ್ಸೆಂಬ ಮಾರ್ಗಸ್ಥನೆ, (ದಾರಿಹೋಕನೆ) ಕುಚಗಳೆಂಬ ಬೆಟ್ಟಗಳಿಂದ ಹೊಗಲಶಕ್ಯವಾಗಿ ಗಹನವಾಗಿರುವ ಕಾಮಿನಿಯ ಕಾಯವೆಂಬ ಕಾಡಿನೊಳು ಕಾಮನೆಂಬ ಕಳ್ಳನಿರುವನಾದಕಾರಣ ಅಲ್ಲಿ ಹೋಗಬೇಡ ಎಂದರೆ, ತರುಣಿಯಲ್ಲಾಸಕ್ತನಾದೊಡೆ ಕೆಡುವಿಯಾದ ಕಾರಣ ಆಸಕ್ತನಾಗಬೇಡವೆಂಬ ತಾತ್ಪರ್ಯವು. .... ||೫೭||

ಶ್ಲೋ|| ವಿಸ್ತಾರಿತಂಮಕರಕೇತನಧೀವರೇಣಸ್ತ್ರೀಸಂಜ್ಞಿತಂಬಡಿಶಮತ್ರ
ಭವಾಂಬುರಾಶೌ || ಯೇನಾಚಿರಾತ್ತದಧರಾಮಿಷಲೋಲಮರ್ತ್ಯ
ಮತ್ಸ್ಯಾನ್ವಿಕೃಷ್ಯವಿಪಚತ್ಯನುರಾಗವಹ್ನೌ ||೫೮||

ಟೀ| ಮತ್ತೊಂದು ರೀತಿಯಿಂದ ಭಯಪಡಿಸುತ್ತಾನೆ, ಮಕರಕೇತನ=ಮನ್ಮಥನೆಂಬ, ಧೀವರೇಣ=ಬೆಸ್ತನಿಂದ, ಅತ್ರ=ಈ, ಭವಾಂಬುರಾಶೌ=ಸಂಸಾರವೆಂಬ ಸಮುದ್ರದಲ್ಲಿ, ಸ್ತ್ರೀ=ಹೆಂಗಸೆಂಬ, ಸಂಜ್ಞಿತಂ=ಸಂಜ್ಞೆಯುಳ್ಳ, ಬಡಿಶಂ=ಗಾಳವು, ವಿಸ್ತಾರಿತಂ=ಬೀಸಲ್ಪಟ್ಟಿರುವದು, ಯೇನ=ಯಾವ ಹೆಂಗಸೆಂಬ ಬಲೆಯಿಂದ, ತತ್=ಆ ಅಂಗನೆಯ, ಅಧರ=ತುಟಿಯೆಂಬ, ಆಮಿಷ=ಮಾಂಸಖಂಡದಲ್ಲಿ, ಲೋಲ=ಆಶಕ್ತರಾದ, ಮರ್ತ್ಯ=ಮನುಷ್ಯರೆಂಬ, ಮತ್ಸ್ಯಾನ್=ಮೀನುಗಳನ್ನು. ವಿಕೃಷ್ಯ=ಸೆಳೆದು, ಅನುರಾಗ=ಮಮತೆಯೆಂಬ, ವಹ್ನೌ=ಬೆಂಕಿಯಲ್ಲಿ, ವಿಪಚತಿ=ಚನ್ನಾಗಿ ಬೇಯಿಸುತ್ತಾನೆ.

ತಾ|| ಕಾಮನೆಂಬ ಬೆಸ್ತನು ಸಂಸಾರವೆಂಬ ಸಮುದ್ರದಲ್ಲಿ ಅಬಲೆಯೆಂಬ ಬಲೆಯನ್ನು ಬಿಡ್ಡಿ, ಆ ಅಬಲೆಯ ಅಧರವೆಂಬ ಮಾಂಸಖಂಡದಲ್ಲಾಸಕ್ತರಾದ ಮನುಜರೆಂಬ ಮೀನುಗಳನ್ನು ಸೆಳೆದು, ಅನುರಾಗವೆಂಬ ಅಗ್ನಿಯಲ್ಲಿ ಚನ್ನಾಗಿ ಬೇಯಿಸುವನು; ಎಂದರೆ ಅಂಗನೆಯರೊಳಾಸಕ್ತನಾದವನು ಅಗ್ನಿಯಲ್ಲಿ ಬೆಂದವನಿಗಿಂತಲೂ ಹೆಚ್ಚಾಗಿ ದುಃಖಪಡುವನೆಂಬ ಭಾವವು. .... .... .... ||೫೮||

ಶ್ಲೋ॥ ವ್ಯಾದೀರ್ಘೇಣಚಲೇನವಕ್ರಗತಿನಾ ತೇಜಸ್ವಿನಾಭೋಗಿನಾ ನೀ
ಲಾಬ್ಜದ್ಯುತಿನಾಹಿನಾಪರಮಹಂದಷ್ಟೋನತಚ್ಚಕ್ಷುಷಾ ॥ ಶಿಷ್ಟಾ
ಸ್ಸಂತಿಚಿಕಿತ್ಸಕಾದಿಶಿದಿಶಿ ಪ್ರಾಯೇಣಧರ್ಮಾರ್ಥಿನೋಮುಗ್ಧಾಕ್ಷಿ
ಕ್ಷಣವೀಕ್ಷಿತಸ್ಯಸಹಿಮೇವೈದ್ಯೋನಚಾಪ್ಯೌಷಧಂ ॥೫೪॥

ಟೀ॥ ಇನ್ನು ಮೂರು ಶ್ಲೋಕಗಳಿಂದ, ಒಬ್ಬನೊಬ್ಬನ ಅನುಭವವನ್ನು ತಿಳಿಸುತ್ತಾನೆ.=ವ್ಯಾದೀರ್ಘೇಣ=ಅತ್ಯಂತ ಉದ್ದವಾದ, ಕರ್ಣಾಂತ ವಿಶ್ರಾಂತ ವಾದ, ಚಲೇನ=ಚಂಚಲವಾದ, ವಕ್ರವಾದ ಸ್ವಭಾವವುಳ್ಳ, ವಕ್ರಗತಿನಾ=ವಕ್ರಸಂಚಾರವುಳ್ಳ, ತೇಜಸ್ವಿನಾ=ಬಲವುಳ್ಳ, ಅತ್ಯಂತಪ್ರಕಾಶಿಸುವ, ಭೋಗಿನಾ=ಹೆಡೆಯುಳ್ಳ, ಆಭೋಗಿನಾ=ವಿಶಾಲವಾದ, ನೀಲಾಬ್ಜದ್ಯುತಿನಾ=ನೀಲಕಮಲದಂತೆ ಕಾಂತಿಯುಳ್ಳ, ಅಹಿನಾ=ಸರ್ಪದಿಂದ, ಪರಂ=ವಿಶೇಷವಾಗಿ, ಅಹಂ=ನಾನು, ದಷ್ಟಃ=ಕಚ್ಚಲ್ಪಟ್ಟಿರುವೆನು, ತಚ್ಚಕ್ಷುಷಾ—ತತ್=ಆ ಕಾಮಿನಿಯ,ಚಕ್ಷುಷಾ=ಕಟಾಕ್ಷದಿಂದ ನದಷ್ಟಃ=ಕಚ್ಚಲ್ಪಡಲಿಲ್ಲವು,ಶಿಷ್ಟಾಃ-ಯೋಗ್ಯರಾದ,ಚಿಕಿತ್ಸಕಾಃ=ವೈದ್ಯರು, ಧರ್ಮಾರ್ಥಿನಃ=ಸುಕೃತಾಪೇಕ್ಷೆಯುಳ್ಳವರಾಗಿ,ದಿಶಿದಿಶಿ=ಪ್ರತಿದಿಕ್ಕಿನಲ್ಲಿಯೂ,ಪ್ರಾಯೇಣ=ಬಹುಶಃ ಸಂತಿ=ಇರುವರು,ಮುಗ್ಧಾ=ಸುಂದರಿಯ,ಅಕ್ಷಿ=ಕಣ್ಣುಗಳಿಂದ, ಕ್ಷಣ=ಕ್ಷಣಕಾಲವು,ವೀಕ್ಷಿತಸ್ಯ=ನೋಡಲ್ಪಟ್ಟ (ವೀಕ್ಷತಸ್ಯ=ಕಚ್ಚಲ್ಪಟ್ಟ) ಮೇ=ನನಗಾದರೊ,ವೈದ್ಯಃ=ಚಿಕಿತ್ಸಕನು, ನಹಿ=ಇಲ್ಲವು, ಔಷಧಂಚ=ಮದ್ದು ನ=ಇಲ್ಲವು,॥೫೪॥

ತಾ॥ ಉದ್ದವಾಗಿಯೂ, ಅತಿಚಪಲವಾಗಿಯೂ, ವಕ್ರವಾದ ಗಮನವುಳ್ಳದ್ದಾಗಿಯೂ, ಬಹು ಬಲವುಳ್ಳದ್ದಾಗಿಯೂ, ದೊಡ್ಡ ಹೆಡೆಯುಳ್ಳದ್ದಾಗಿಯೂ ಇರುವ ಕೃಷ್ಣಸರ್ಪದಿಂದ ಅನೇಕಾವರ್ತಿ ಕಚ್ಚಿಸಿಕೊಂಡಿರುವೆನು. ಆದರೆ ವಿಶಾಲವಾಗಿ ಚಾಂಚಲ್ಯದಿಂದ ಹೊಳೆಯುವ, ವಕ್ರವಾದ ಕಾಮಿನಿಯ ಕಟಾಕ್ಷದಿಂದ ಮಾತ್ರ ಕಚ್ಚಿಸಿಕೊಳ್ಳಲಿಲ್ಲವು. ಏಕೆಂದರೆ ವಿಷದಿಂದ ಭಯಂಕರವಾಗಿರುವ ಹಾವಿನಿಂದ ಕಚ್ಚಿಸಿಕೊಂಡರೂ ಧರ್ಮಾರ್ಥಿಗಳಾದ ಔಷಧವನ್ನು ಕೊಟ್ಟು ವಿಷವನ್ನಿಳಿಸುವ ವೈದ್ಯರು ಎಲ್ಲಾ ಕಡೆಯಲ್ಲಿಯೂ ಇರುವರು. ಕಾಮಿನಿಯ ಕಟಾಕ್ಷದಿಂದ ಕಚ್ಚಲ್ಪಟ್ಟವನಿಗೆ ಆದರೆ ತಕ್ಕ ವೈದ್ಯನೂ ಇಲ್ಲ. ಔಷಧವೂ ಸುತರಾಂ ಇಲ್ಲವು, ಮೋಹಾಗ್ನಿಯೊಳು ಮುಳುಗುವದೇ ನಿಜವೆಂದರಿಯುವನು. ॥೫೪॥

ಶ್ಲೋ॥ ಇಹಹಿಮಧುರಗೀತಂನೃತ್ಯಮೇತದ್ರಸೋಯಂ ಸ್ಫುರತಿಪರಿಮ
ಳೋಸೌಸ್ಪರ್ಶಏಷಸ್ತನಾನಾಂ ॥ ಇತಿಹತಪರಮಾರ್ಥೈರಿಂದ್ರ
ಯೈರ್ಭ್ರಾಮ್ಯಮಾಣಸ್ಸ್ವಹಿತಕರಣಧೂರ್ತೈಃಪಂಚಭಿರ್ವಂಚಿ
ತೋಸ್ಮಿ ॥ .... .... ॥೫೫॥

ಟೀ॥ ಇಹ=ಈ ತರುಣಿಯರಲ್ಲಿಯೆ, ಮಧುರಗೀತಂ=ಇಂಪಾದ ಗಾನವು, ಸ್ಫುರತಿ=ಪ್ರಕಾಶಿಸುವುದು, ಏತತ್=ಇದೇ, ನೃತ್ಯಂ=ನಾಟ್ಯವು, ಸ್ಫುರತಿ=ಹೊಳೆವುದು, ಅಯಂ=ಇದೆ, ರಸಃ=ಅಧರಾಮೃತವು, ಸ್ಫುರತಿ=ಪ್ರಜ್ವಲಿಸುವದು, ಅಸೌ=ಈ, ಪರಿಮಳಃ=ವದನ ಗಂಧವು, ಸ್ಫುರತಿ=ಕಂಗೊಳಿಪುದು, ಏಷಃ=ಈ, ಸ್ತನಾನಾಂ=ಕುಚಗಳ, ಸ್ಪರ್ಶಃ=ಸ್ಪರ್ಶವು, ಸ್ಫುರತಿ=ಕಂಗೊಳಿಪುದು, ಇತಿ—ಈಪ್ರಕಾರವಾಗಿ, ಹತ=ನಷ್ಟವಾದ, ಪರಮಾರ್ಥೈಃ=ನಿಜವಾದ ಅರ್ಥವುಳ್ಳ, ಸ್ವಹಿತಕರಣಧೂರ್ತೈಃ=ತಮಗೆ ಹಿತವನ್ನು ಮಾಡಿಕೊಳ್ಳುವದರಲ್ಲಾಸಕ್ತವಾದ, ಪಂಚಭಿಃ=ಐದಾದ, ಇಂದ್ರಿಯೈಃ=ಶ್ರೋತ್ರಾದಿಗಳಿಂದ, ಭ್ರಾಮ್ಯಮಾಣಃ=ಭ್ರಮಿಸುವನಾಗಿ, ವಂಚಿತಃ=ಮೋಸಗೊಳಿಸಲ್ಪಟ್ಟವನು, ಅಸ್ಮಿ=ಆಗಿರುವೆನು. ... ॥೫೫॥

ಆಹಾ! ಈ ತರುಣಿಯರಲ್ಲಿಯೇ ಲೋಕೋತ್ತರವಾಗಿಯೂ, ಇಂಪಾಗಿಯೂ ಇರುವ ಗಾನವಿರುವದು, ಇವರ ನರ್ತನವೇ ಸರ್ವೋತ್ತಮವಾದದ್ದು, ಈ ಅಂಗನೆಯ ಅಧರಾಮೃತವೇ ಸರ್ವೋತ್ಕೃಷ್ಟವಾದದ್ದು. ಈ ಕಾಮಿನಿಯರ ವದನ ಕಮಲಗಂಧವೇ ಅತ್ಯುತ್ತಮವಾಗಿರುವದು. ಮತ್ತು ಈ ಕಾಂತೆಯರ ಕುಚಕುಂಭಗಳ ಸ್ಪರ್ಶವೇ ಪರಮಹಿತವಾದದ್ದು ಎಂಬೀ ಭ್ರಾಂತಿಯಿಂದ ಪರಮಾರ್ಥವನ್ನು ತೊರೆದು, ಸಾರವಿಲ್ಲದ ಸ್ವಪ್ರಯೋಜನವನ್ನು ಮಾಡಿಕೊಳ್ಳುವ ಕಿವಿ ಕಣ್ಣು ಮೊದಲಾದ ಪಂಚೇಂದ್ರಿಯಗಳಿಂದ ಅನ್ಯಾಯವಾಗಿ ವಂಚಿಸಲ್ಪಟ್ಟೆನು, ಆದರೆ ವಿವೇಕಿಯು ಹೀಗೆ ಆಗಬಾರದೆಂದು ಭಾವವು. .... ॥೫೬॥

ಶ್ಲೋ॥ ನಗಮ್ಯೋಮಂತ್ರಾಣಾಂನಚಭವತಿ ಭೈಷಜ್ಯವಿಷಯೋನಚಾಪಿ
ಪ್ರಧ್ವಂಸಂವ್ರಜತಿವಿವಿಧೈಃಶಾಂತಿಕಶತೈಃ ॥ ಭ್ರಮಾವೇಶಾದಂಗೆ
ಕಮಪಿವಿದಧದ್ಭಂಗಮಸಕೃತ್ಸ್ಮರಾಪಸ್ಮಾರೋಯಂಭ್ರಮಯತಿ
ದೃಶಂಘೂರ್ಣಯತಿಚ ॥ .... .... ॥೫೭॥

ಟೀ॥ ಅಂಗನೆಯೊಳು ವ್ಯಾಮೋಹವನ್ನುಂಟುಮಾಡುವ ಮದನನ್ನು ದೂಷಿಸುತ್ತಾನೆ— ಮಂತ್ರಾಣಾಂ=ಮಂತ್ರಗಳಿಗೆ, ನಗಮ್ಯಃ=ಸಾಧ್ಯವಾಗುವದಿಲ್ಲ, ಭೈಷಜ್ಯವಿಷಯಃ=ಔಷಧಗಳಿಗೆ ಗೋಚರವು, ನಚಭವತಿ=ಆಗುವದಿಲ್ಲ. ವಿವಿಧೈಃ=ನಾನಾಬಗೆಯಾದ, ಶಾಂತಿಕ=ಶಾಂತಿಗಳ, ಶತೈಃ=ನೂರುಗಳಿಂದ, ಪ್ರಧ್ವಂಸಂಚಾಪಿ=ನಾಶವನ್ನೂ, ನವ್ರಜತಿ=ಹೊಂದುವದಿಲ್ಲ, ಭ್ರಮಾವೇಶಾತ್=ಮೋಹವನ್ನುಂಟುಮಾಡುವವರ ದೆಸೆಯಿಂದ, ಅಂಗೆ=ಶರೀರದಲ್ಲಿ, ಕಮಪಿ=ಹೇಳಲಶಕ್ಯವಾದ, ಭಂಗಂ=ಜಾಡ್ಯವನ್ನು, ಅಸಕೃತ್=ಅನೇಕಾವರ್ತಿ, ವಿದಧತ್=ಉಂಟುಮಾಡುವ

ವ, ಸ್ಮರ-ಮನ್ಮಥ ಪ್ರಯುಕ್ತವಾದ, ಅಯಂ=ಈ, ಅಪಸ್ಮಾರಃ=ಅಪಸ್ಮಾರರೋಗವು, ದೃಶಂ=ದೃಷ್ಟಿಯನ್ನು. ಭ್ರಮಯತಿ=ಭ್ರಾಂತಿಗೊಳಿಸುವುದು, ಘೂರ್ಣಯತಿಚ=ತಿರುಗಿಸುವದು. .... .... .... ||೫೬||

ತಾ|| ಸಕಲವಾದ ಮಂತ್ರತಂತ್ರಗಳಿಗಸಾಧ್ಯವಾಗಿ, ಯಾವವಿಧವಾದ ಔಷಧಗಳಿಂದಲೂ ನಿವಾರಣ ಮಾಡಲಶಕ್ಯವೆನಿಸಿ ದೇವತಾರಾಧನಾದಿ ಶಾಂತಿಗಳಿಂದಲೂ ಸಮಾಧಾನವಾಗದಿರುವದಾಗಿ, ಎಲ್ಲಾ ಅವಯವಗಳಲ್ಲಿಯೂ, ವಿಚಿತ್ರವಾದ ಮೋಹವನ್ನುಂಟುಮಾಡುತಲಿರುವ ಕಾಮವಿಕಾರವೆಂಬ ಅಪಸ್ಮಾರರೋಗವು ದೃಷ್ಟಿಯನ್ನು ವ್ಯತ್ಯಾಸಪಡಿಸುತಲೂ ತಿರುಗಿಸುತ್ತಲೂ ಮತ್ತತೆಯನ್ನುಂಟುಮಾಡುವದು, ಕಾಮಿನಿಯ ಸಹವಾಸವು ಅಪಸ್ಮಾರರೋಗ ಸದೃಶವಾದದ್ದೆಂದು ಭಾವವು. ||೫೬||

ಶ್ಲೋ|| ಜಾತ್ಯಂಧಾಯಚದುರ್ಮ್ಮುಖಾಯಚಜರಾಜೀರ್ಣಾಖಿಲಾಂಗಾಯಚ
ಗ್ರಾಮೀಣಾಯಚದುಷ್ಕುಲಾಯಚಗಳತ್ಕುಷ್ಠಾಭಿಭೂತಾಯಚ||
ಯಚ್ಛಂತೀಷುಮನೋಹರಂನಿಜವಪುರ್ಲಕ್ಷ್ಮೀಲವಶ್ರದ್ಧಯಾಪ
ಣ್ಯಸ್ತ್ರೀಷುವಿವೇಕಕಲ್ಪಲತಿಕಾಶಸ್ತ್ರೀಷುರಜ್ಯೇತಕಃ ||೫೭||

ಟೀ|| ಮೂರು ಶ್ಲೋಕಗಳಿಂದ ವೇಶ್ಯಾಂಗನೆಯನ್ನು ದೂಷಿಸುತ್ತಾನೆ— ಜಾತ್ಯಂಧಾಯಚ=ಹುಟ್ಟುಕುರುಡನಿಗೆ, ದುರ್ಮ್ಮುಖಾಯಚ=ದುರ್ಭಾಷೆಯಿಂದ ದುಷ್ಟಮುಖವುಳ್ಳವನಿಗೆ, ಜರಾ=ಮುಪ್ಪಿನಿಂದ, ಜೀರ್ಣ=ಶಿಥಿಲವಾದ, ಅಂಗಾಯಚ=ಅವಯವವುಳ್ಳವನಿಗೆ, ಗ್ರಾಮೀಣಾಯಚ=ಹಳ್ಳಿಯ ಕುರುಬನಿಗೆ, ದುಷ್ಕುಲಾಯಚ=ಹೀನಕುಲದಲ್ಲಿ ಹುಟ್ಟಿದವನಿಗೆ, ಗಳತ್=ಬಿದ್ದುಹೋಗುವ, ಕುಷ್ಠ=ಕುಷ್ಠರೋಗದಿಂದ, ಅಭಿಭೂತಾಯಚ=ತಿರಸ್ಕೃತನಿಗೆ, ಲಕ್ಷ್ಮೀ=ಸಂಪತ್ತಿನ, ಲವ=ಲೇಶದ, ಶ್ರದ್ಧಯಾ=ವಿಶ್ವಾಸದಿಂದ, ಮನೋಹರಂ=ಸುಂದರವಾದ, ನಿಜಂ=ಸ್ವಂತವಾದ, ವಪುಃ=ಶರೀರವನ್ನು, ಯಚ್ಛಂತೀಷು=ಕೊಡುವ, ವಿವೇಕ=ಯುಕ್ತಾ, ಯುಕ್ತ ವಿಚಾರವೆಂಬ, ಕಲ್ಪಲತಿಕಾ=ಕಲ್ಪಲತೆಗೆ, ಶಸ್ತ್ರೀಷು=ಆಯುಧಗಳಾದ, ಪಣ್ಯಸ್ತ್ರೀಷು=ವೇಶ್ಯಾಂಗನೆಯರಲ್ಲಿ, ಕಃ=ಯಾವ ಪುರುಷನು, ರಜ್ಯೇತ=ಅನುರಕ್ತನಾದಾನು? ||೫೭||

ತಾ|| ಹುಟ್ಟುಕುರುಡನಿಗೂ, ಅಸಂಬದ್ಧಪ್ರಲಾಪಿಗೂ, ಅಜ್ಜುಗುಜ್ಜು ಮುದುಕನಿಗಾದರೂ, ಅಜ್ಞಾತ ಕುಲಗೋತ್ರನಿಗೂ, ಹೀನಕುಲದೊಳು ಪುಟ್ಟಿದವನಿಗೂ, ಕುಷ್ಠಾದಿ ಮಹಾವ್ಯಾಧಿಗ್ರಸ್ತನಿಗೂ, ಅತ್ಯಲ್ಪವಾದ ಧನದಾಶೆಯಿಂದ ಸಂಭೋಗಾರ್ಥವಾಗಿ ತಮ್ಮ ಮನೋಹರವಾದ

ಶರೀರವನ್ನು ದಾಸವಮಾಡುತ್ತ, ಯುಕ್ತಾಯುಕ್ತ ವಿಚಾರವೆಂಬ ಎಳೆಯು
ಬಳ್ಳಿಯನ್ನು ಅಮೂಲಾಗ್ರವಾಗಿ ಹಾಳುಮಾಡುವ ವೇಶ್ಯಾಂಗನೆಯರಲ್ಲಿ
ಯಾವನಾದರೂ ವಿಶ್ವಾಸವನ್ನು ಮಾಡುವನೆ? ಬಂದು ಕಾಲಕ್ಕೂ ಮಾಡ
ಲಾತನು .... .... ||೫೭||

ಶ್ಲೋ|| ವೇಶ್ಯಾಸೌಮದನಜ್ವಾಲಾರೂಪೇಂಧನವಿವರ್ಧಿತಾ || ಕಾಮಿಭಿರ್ಯ
ತ್ರಹೂಯಂತೇಯೌವನಾನಿಧನಾನಿಚ .... ||೫೮||

ಟೀ|| ಅಸೌ=ಈ, ವೇಶ್ಯಾ=ಸೂಳೆಯು, ರೂಪ=ಸೌಂದರ್ಯವೆಂಬ, ಇಂಧನ=
ಕಟ್ಟಿಗೆಯಿಂದ, ವಿವರ್ಧಿತಾ=ವೃದ್ಧಿಹೊಂದಿಸಲ್ಪಟ್ಟ, ಮದನಜ್ವಾಲಾ=ಮನ್ಮಥಾ
ಗ್ನಿಯು. ಯತ್ರ=ಯಾವ ಮದನಜ್ವಾಲಾರೂಪವಾದ ವೇಶ್ಯೆಯಲ್ಲಿ, ಕಾಮಿಭಿಃ=
ಕಾಮುಕರಿಂದ, ಯೌವನಾನಿ=ಹೊಸದಾದ ವಯಸ್ಸುಗಳು, ಧನಾನಿಚ=ದ್ರವ್ಯಗ
ಳೂ, ಹೂಯಂತೇ=ಹವನ ಮಾಲ್ಪಡುತ್ತವೆಸೆ. .... ||೫೮||

ತಾ|| ಸೌಂದರ್ಯವೆಂಬ ಕಟ್ಟಿಗೆಯಿಂದುರಿಯುತ್ತಿರುವ ವೇಶ್ಯಾಂಗನೆ
ಯೆಂಬ ಮದನಾಗ್ನಿಯಲ್ಲಿ ಕಾಮುಕರು ತಮ್ಮ ಪ್ರಾಯವನ್ನು, ದ್ರವ್ಯವ
ನ್ನು ಇತ್ತು ನಷ್ಟವಾಗುವರು. ವಿವೇಕಿಯಾದವನು ಹಾಗೆ ಆಗಬಾರದೆಂ
ದಾಶಯವು. .... .... .... ||೫೮||

ಶ್ಲೋ|| ಕಶ್ಚುಂಬತಿಕುಲಪುರುಷೋವೇಶ್ಯಾಧರ ಪಲ್ಲವಂಮನೋಜ್ಞಮ
ಪಿ||ಚಾರಭಟಚೋರಚೇಟಕವಿಟನಟನಿಷ್ಠೀವನಶರಾವಂ ||೫೯||

ಟೀ|| ಮನೋಜ್ಞಮಪಿ=ಸುಂದರವಾಗಿದ್ದರೂ. ವೇಶ್ಯಾಯಾಃ=ವೇಶ್ಯಾಂಗನೆ
ಯು, ಅಧರಪಲ್ಲವಂ=ಚಿಗುರಿನಂತಿರುವ ತುಟಿಯನ್ನು, ಕಃ ಕುಲಪುರುಷಃ=ಸತ್ಕುಲ
ಪ್ರಸೂತನಾದ ಯಾವ ಮನುಷ್ಯನು, ಚುಂಬತಿ=ಚುಂಬಿಸುವನು? ತತ್=ಆ ಅಧ
ರವು, ಚಾರ=ಗೂಢಪುರುಷರು, ಭಟ=ಯೋಧರು, ಚೋರ=ಕಳ್ಳರು. ಚೇಟಕ=
ಸ್ತ್ರೀಪುರುಷಸಂಧಾನ ಕುಶಲರು, ವಿಟ=ಜಾರರು, ನಟ=ವೇಷಧಾರಿಗಳಾದ ನರ್ತ
ಕರು ಇವರುಗಳ, ನಿಷ್ಠೀವನಶರಾವಂ=ಉಚ್ಛಿಷ್ಟಪಾತ್ರೆಯು, .... ||೫೯||

ತಾ|| ನಟರು, ವಿಟರು, ತಲೆಹಿಡುಕರು, ಚೋರರು ಮೊದಲಾದ ಹೀನ
ಜಾತಿಯವರ ಎಂಜಲಿನ ಸಂಬಂಧದಿಂದ ಎಂಜಲುಬೋಕಿಯಂತೆ ಅತ್ಯಸಹ್ಯ
ಕರವಾಗಿ, ನೋಡುವದಕ್ಕೆ ಮಾತ್ರ ಸುಂದರವಾಗಿಕಾಣುವ ವೇಶ್ಯಾಂ
ಗನೆಯ ತುಟಿಯನ್ನು ಜಾತಿನೀತಿ ಕುಲಾಚಾರ ಧರ್ಮಗಳನ್ನು ತಿಳಿದ ಕುಲ
ಪುರುಷನು ಬಂದು ಕಾಲಕ್ಕಾದರೂ ಚುಂಬಿಸುವನೆ? ಸರ್ವಥಾ ಚುಂಬಿಸ
ಲಾರನು. .... .... .... ||೫೯||

ಶ್ಲೋ॥ ಮಧುತಿಷ್ಠತಿವಾಚಿಯೋಷಿತಾಂಹೃದಿಹಾಲಾಹಲಮೇವಕೇವಲಂ।
ಅತಏವನಿಪೀಯತೇಧರೋಹೃದಯಂಮುಷ್ಟಿಭಿರೇವತಾಡ್ಯತೇ॥

ಟೀ॥ ಸ್ತ್ರೀಯರುಸರ್ವಥಾ ತ್ಯಾಜ್ಯರು ಎಂಬದಾಗಿ ಸೂಚಿಸುತ್ತಾನೆ.—ಯೋಷಿತಾಂ=ಸ್ತ್ರೀಯರ, ವಾಚಿ=ವಾಕ್ಕಿನಲ್ಲಿ, ಮಧು=ಅಮೃತವು, ತಿಷ್ಠತಿ=ಇರುವದು, ಹೃದಯಿ=ಶರೀರದಲ್ಲಿ, (ಎದೆಯಲ್ಲಿ) ಕೇವಲಂ=ವಿಶೇಷವಾಗಿ, ಹಾಲಾಹಲಮೇವ=ಕಾಲಕೂಟವಿಷವೆ, ಅತಏವ=ಆದಕಾರಣದಿಂದಲೆ,ಅಧರಃ=ತುಟಿಯು, ನಿಪೀಯತೆ=ಪಾನಮಾಡಲ್ಪಡುವದು, ಹೃದಯಂ=ಎದೆಯು, ಮುಷ್ಟಿಭಿಃ=ಹಿಡಿಗಳಿಂದ, ತಾಡ್ಯತೆ ಏವ=ಹೊಡೆಯಲ್ಪಡುವದು. .... ... ॥೬೦॥

ತಾ॥ ವನಿತೆಯರ ವಾಕ್ಕಿನೊಳು ಅಮೃತವಿರುವದು. ಹೃದಯದೊಳು ಕಾಲಕೂಟ ವಿಷವಿರುವದು. ಆದುದರಿಂದಲೇ ಲೋಕದೊಳು ಜನರೆಲ್ಲರೂ ಅಂಗನೆಯರ ಅಧರವನ್ನು ಆನಂದದಿಂದ ಚುಂಬಿಸುವರು. ಹೃದಯವನ್ನು ಹಸ್ತಗಳಿಂದ ಮರ್ದಿಸುವರು ಎಂದರೆ ಕಾಮಿನಿಯರು ಮಾತನ್ನು ಮಾತ್ರ ಮೃದುವಾಗಿ ಆಡುತ, ಹೃದಯದಲ್ಲಿ ವಿಷವನ್ನು ತುಂಬಿಕೊಂಡಿರುವರು, ಆದ್ದರಿಂದಲೆ ತ್ಯಾಜ್ಯರೆಂದಾಶಯವು .... ॥೬೦॥



## ಸುವಿರಕ್ತ ದುರ್ವಿರಕ್ತ ಪದ್ಧತಿ ವರ್ಣನಾರಂಭವು.

ಶ್ಲೋ॥ ಧನ್ಯಾಸ್ತಏವಧವಳಾಯತಲೋಚನಾನಾಂ ತಾರುಣ್ಯದರ್ಪಘನಪೀನಪಯೋಧರಾಣಾಂ ॥ ಕ್ಷಾಮೋದರೋಪರಿಲಸತ್ತ್ರಿವಳೀಲತಾನಾಂದೃಷ್ಟ್ವಾಕೃತಿಂವಿಕೃತಿಮೇತಿಮನೋನಯೇಷಾಂ ॥೬೧॥

ಟೀ॥ ಮೊದಲು ಸುವಿರಕ್ತರನ್ನು ವರ್ಣಿಸುತ್ತಾನೆ—ಧವಳ=ಬೆಳ್ಳಗಿರುವ, ಆಯತ=ವಿಶಾಲವಾದ, ಲೋಚನಾನಾಂ=ನಯನವುಳ್ಳ, ತಾರುಣ್ಯದರ್ಪ=ಪ್ರಾಯದ ಮದದಿಂದ, ಘನ=ನಿಬಿಡವಾದ, ಪೀನ=ಬಲಿತ, ಪಯೋಧರಾಣಾಂ=ಕುಚಗಳುಳ್ಳ, ಕ್ಷಾಮೋದರ=ಕೃಶವಾದ ಮಧ್ಯದ, ಉಪರಿ=ಮೇಲೆ, ಲಸತ್=ಹೊಳೆವ, ತ್ರಿವಳೀಲತಾನಾಂ=ಬಳ್ಳಿಯಂತಿರುವ ವಳಿತ್ರಯವುಳ್ಳ ಕಾಮಿನಿಯರ, ಆಕೃತಿಂ=ಆಕಾರವನ್ನು, ದೃಷ್ಟ್ವಾ=ನೋಡಿ, ಯೇಷಾಂ=ಯಾರ, ಮನಃ=ಮನಸ್ಸು, ವಿಕೃತಿಂ=ವಿಕಾರವನ್ನು, ನೈತಿ=ಹೊಂದುವದಿಲ್ಲವೋ, ತಏವ=ಅವರೆ, ಧನ್ಯಾಃ=ಸುಕೃತಿಗಳು

ತಾ॥ ಪುಂಡರೀಕ ದಳದಂತೆ ಧವಳವಾಗಿಯೂ, ವಿಶಾಲವಾಗಿಯೂ

ಇರುವ ನಯನಗಳುಳ್ಳವರಾಗಿ, ಪ್ರಾಯದ ಕೊಬ್ಬಿನಿಂದ ಬಲಿತು ನಿಬಿಡ ವಾದ ಕುಚಕುಂಭಗಳಿಂದ ಶೋಭಿಸುತ, ಕೃಶವಾಗಿರುವ ಮಧ್ಯಭಾಗದ ಮೇಲ್ಭಾಗದೊಳು ಶೋಭಿಸುವ ತ್ರಿವಳಿಗಳುಳ್ಳ ರಮಣೀಯರಾದ ತರುಣಿ ಯರ ಅಪೇಕ್ಷಿತವಾದ ಸೌಂದರ್ಯವನ್ನು ನೋಡಿ ಯಾರ ಮನಸ್ಸಾದರೆ ವಿಕಾ ರವನ್ನೈದದಿರುವದೊ ಅವರೇ ಲೋಕದೊಳು ಸರ್ವೋನ್ನತರಾದ ಸುಕೃ ತಿಗಳೆಂದರಿಯತಕ್ಕದ್ದು .... .... .... ॥೬೧॥

ಶ್ಲೋ॥ ಬಾಲೇಲೀಲಾಮುಕುಳಿತಮಮೀಮಂಥರಾದೃಷ್ಟಿಪಾತಾಃಕಿಂಕ್ಷಿ
ಪ್ಯಂತೇವಿರಮವಿರಮವ್ಯರ್ಥಏಷಶ್ರಮಸ್ತೇ ॥ ಸಂಪ್ರತ್ಯನ್ಯೇ
ವಯಮುಪರತಂಬಾಲ್ಯಮಾಸ್ಥಾ ವನಾಂತೇಕ್ಷೀಣೋಮೋಹಸ್ತೃ
ಣಮಿವಜಗಜ್ಜಾಲಮಾಲೋಕಯಾಮಃ .... ॥೬೨॥

ಟಿ॥ ವೈರಾಗ್ಯವನ್ನು ಪ್ರಕಟಿಸುತ್ತಾನೆ--ಹೇಬಾಲೆ=ಎಲೈ ಮುಗ್ಧೆಯೇ, ಲೀ ಲಾ=ವಿಲಾಸದಿಂದ, ಮುಕುಳಿತಂ=ನಿಮೀಲನವುಳ್ಳಂತೆ, ಮಂಥರಾಃ=ಮಂದವಾದ, ಅಮೀ=ಈ, ದೃಷ್ಟಿಪಾತಾಃ=ಕಟಾಕ್ಷಗಳು, ಕಿಂ=ಏತಕ್ಕೋಸ್ಕರ, ಕ್ಷಿಪ್ಯಂತೇ=ಪ್ರ ಸರಿಸಲ್ಪಡುತ್ತವೆ, ವಿರಮವಿರಮ=ನಿಲ್ಲಿಸು ನಿಲ್ಲಿಸು, ಏಷಃ=ಈ, ತೇ=ನಿನ್ನ, ಶ್ರ ಮಃ=ಆಯಾಸವು, ವ್ಯರ್ಥಃ=ನಿಷ್ಫಲವು, ಸಂಪ್ರತಿ=ಈಗ, ವಯಂ=ನಾವುಗಳು, ಅನ್ಯೇ=ಬೇರೆಜನಗಳು, ಬಾಲ್ಯಂ=ಚಿಕ್ಕತನವು, ಉಪರತಂ=ನಷ್ಟವಾಯಿತು, ಆಸ್ಥಾ= ವಿಶ್ವಾಸವು, ವನಾಂತೇ=ಅರಣ್ಯಮಧ್ಯದಲ್ಲಿ, ವರ್ತತೇ=ಇರುವದು, ಮೋಹಃ=ಅಜ್ಞಾ ನವು, ಕ್ಷೀಣಃ=ನಷ್ಟವಾಯಿತು, ಜಗಜ್ಜಾಲಂ=ಅಶೇಷ ಪ್ರಪಂಚವನ್ನು, ತೃಣ ಮಿವ=ನಿಸ್ಸಾರ ಪದಾರ್ಥದಂತೆ, ಆಲೋಕಯಾಮಃ=ನೋಡುವೆವು. ॥೬೬॥

ತಾ॥ ಎಲೆ ತರುಣಿಯೆ, ವಿಚಿತ್ರವಾದ ವಿಲಾಸಗಳಿಂದ ಚಮತ್ಕಾರ ವಾದ ಕಟಾಕ್ಷಗಳನ್ನು ನಮ್ಮ ಮೇಲೆ ಹಾಕಬೇಡ, ಏತಕ್ಕೆ ಶ್ರಮಪ ಡುವಿ, ಸುಮ್ಮನಿರು, ಏತಕ್ಕೆಂದರೆ-ನಮಗೆ ಅವಿವೇಕವು ಕಳೆದು ಹೋ ಯಿತು. ಈಗಲೋ, ಕಾಡಿನಲ್ಲಿ ವಾಸಮಾಡಲು ಆಶೆಯು. ಅಜ್ಞಾನ ವು ನಷ್ಟವಾಯಿತು, ಆದುದರಿಂದಲೆ ಸಮಸ್ತ ಪ್ರಪಂಚವನ್ನೂ ನಿಸ್ಸಾರ ವಾದುದನ್ನಾಗಿ ನೋಡುವೆವು, ಆದ್ದರಿಂದ ಮೊದಲಿಗಿಂತಲೂ ಬೇರೆ ಜನ ವಾಗಿರುವೆವು, ನಿನ್ನ ಚಾತುರ್ಯಕ್ಕೆ ಬಳಗಾಗೆವು. .... ॥೬೨॥

ಶ್ಲೋ॥ ಇಯಂಬಾಲಾಮಾಂ ಪ್ರತ್ಯನವರತಮಿಂದೀವರದಳಪ್ರಭಾಚೋ
ರಂಚಕ್ಷುಃಕ್ಷಿಪತಿಕಿಮಭಿಪ್ರೇತಮನಯಾ ॥ ಗತೋಮೋಹೋ

ಸ್ಮರ ಕಂಸ್ಮರಶಬರಬಾಣವ್ಯತಿಕರಜ್ವರಜ್ವಾಲಾ ಶಾಂತಾತದಪಿನವ
ರಾಕೀವಿರಮತಿ .... .... ॥೬೩॥

ಟೀ॥ ಹೇಳಿದರ್ಥವನ್ನು ಬೇರೆವಿಧದಿಂದ ಹೇಳುತ್ತಾನೆ—ಇಯಂ=ಈ, ಬಾಲಾ=ಮುಗ್ಧೆಯು, ಮಾಂಪ್ರತಿ=ನನ್ನನ್ನು ಕುರಿತು, ಅನವರತಂ=ಯಾವಾಗಲೂ, ಇಂದೀವರ=ಕನ್ನೈದಿಲೆಯ, ದಳ=ಪತ್ರದ, ಪ್ರಭಾ=ಕಾಂತಿಯನ್ನು, ಚೋರಂ=ಅಪಹರಿಸುವ, ಚಕ್ಷುಃ=ದೃಷ್ಟಿಯನ್ನು, ಕ್ಷಿಪತಿ=ಪ್ರಸರಿಸುವಳು, ಅನಯಾ=ಈ ಬಾಲೆಯಿಂದ, ಕಿಂ=ಏನು, ಅಭಿಪ್ರೇತಂ=ಅಪೇಕ್ಷಿಸಲ್ಪಟ್ಟಿರುವದೋ, ಅಸ್ಮಾಕಂ=ನಮಗೆ, ಮೋಹಃ=ಭ್ರಮೆಯು, ಗತಃ=ಶಾಂತವಾಯಿತು, ಸ್ಮರ=ಮನ್ಮಥನೆಂಬ, ಶಬರ=ಬೇಡನ, ಬಾಣ=ಅಂಬಿನ, ವ್ಯತಿಕರ=ಸಂಬಂಧದಿಂದುಂಟಾದ, ಜ್ವರ=ಸಂತಾಪದ, ಜ್ವಾಲಾ=ಉರಿಯು, ಶಾಂತಾ=ತಣ್ಣಗಾಯಿತು, ತದಪಿ=ಹಾಗಾದಾಗ್ಯೂ ವರಾಕೀ=ಈ ತುಚ್ಛಗಳು, ನವಿರಮತಿ=ಸುಮ್ಮನಾಗಳು. ॥೬೩॥

ತಾ॥ ಸಂಭೋಗಾಭಿಲಾಷೆಯು ಶಾಂತವಾಗಿ, ಕಾಮನೆಂಬ ಬೇಡನಂಬಿನ ಪೆಟ್ಟಿನಿಂದುಂಟಾಗುವ ಮದನಸಂತಾಪಗಳೊಂದೂ ಇಲ್ಲದೆ ಇದ್ದಾಗ್ಯೂ, ನಮ್ಮನ್ನು ನೋಡಿ ಕನ್ನೈದಿಲೆಯಂತೆ ಕಮನೀಯವಾದ ಕಣ್ಣುಳ್ಳ ಕುತ್ಸಿತಳಾದೀ ಕಾಮಿನಿಯು ಸುಮ್ಮನಿರದೆ ಕಟಾಕ್ಷಗಳನ್ನು ನಮ್ಮ ಮೇಲೆ ವೃಥಾ ಹಾಕುವಳಲ್ಲಾ ? ಇನ್ನೆಂದಿಗೂ ಇವಳಿಗೆ ನಾವು ವಶರಾಗೆವು ಎಂದು ಒಬ್ಬಾನೊಬ್ಬ ವೈರಾಗ್ಯವನ್ನು ಹೊಂದಿದಾತನ ವಚನವನ್ನಭಿನಯಿಸಿ ಪೇಳಿದನೆಂದು ಭಾವವು .... ॥೬೩॥

ಶ್ಲೋ॥ ಕಿಂಕಂದರ್ಪಶರಂಕದರ್ಥಯಸಿರೇಕೋದಂಡಟಂಕಾರಿತಂರೇರೇ
ಕೋಕಿಲಕೋಮಲಂಕಲರವಂಕಿಂವಾವೃಥಾಜಲ್ಪಸಿ ॥ ಮುಗ್ಧೇ
ಸ್ನಿಗ್ಧವಿದಗ್ಧಚಾರು ಮಧುರೈರ್ಲೋಲೈಃಕಟಾಕ್ಷೈರಲಂಚೇತ
ಶ್ಚುಂಬಿತಚಾಸುದೇವಚರಣಧ್ಯಾನಾಮೃತಂವರ್ತತೇ ॥೬೪॥

ಟೀ॥ ಕಂದರ್ಪನ ದರ್ಪವನ್ನು ನಿರಾಕರಿಸುವ ಮಾತನ್ನು ಹೇಳುತ್ತಾನೆ—ರೇಕಂದರ್ಪ=ಎಲಾ ನೀಚಮನ್ಮಥನೇ, ಕೋದಂಡಟಂಕಾರಿತಂ=ಕೋದಂಡದಂತೆ ಟಂಕಾರವುಳ್ಳ, ಶರಂ=ನಿನ್ನ ಬಾಣವನ್ನು, ಕಿಂ=ಏತಕ್ಕೋಸ್ಕರ, ಕದರ್ಥಯಸಿ=ವ್ಯರ್ಥವಾಗಿ ಮಾಡಿಕೊಳ್ಳುತ್ತೀಯೆ, ರೇಕೋಕಿಲ=ಎಲಾ ಹೀನಕೋಗಿಲೆಯೇ, ಕೋಮಲಂ=ಮನೋಹರವಾದ, ಕಲರವಂ=ಮಧುರಸ್ವರವನ್ನು, ಕಿಂವಾ=ಏತಕ್ಕೋಸ್ಕರ, ವೃಥಾ=ವ್ಯರ್ಥವಾಗಿ, ಜಲ್ಪಸಿ=ಕೂಗುತ್ತೀಯೆ ! ರೇಮುಗ್ಧೇ=ಎಲೇ ಸುಂದರಿ, ಸ್ನಿಗ್ಧ=ಸ್ನೇಹಯುಕ್ತವಾದ, ವಿದಗ್ಧ=ವಿಲಾಸ ಸೂಚನೆಯಲ್ಲಿ ಚತುರವಾದ,

ಚಾರು=ಮನೋಹರವಾದ, ಮಧುರೈಃ=ಹಿತವಾದ, ಲೋಲೈಃ=ಚಂಚಲವಾದ, ಕಟಾಕ್ಷೈಃ=ಕಡೆಗಣ್ಣು ನೋಟಗಳಿಂದ, ಅಲಂ=ಸಾಕು, ಚೇತಃ=ನನ್ನ ಮನಸ್ಸು, ಚುಂಬಿತ=ಆಸ್ವಾದಿಸಲ್ಪಟ್ಟ, ವಾಸುದೇವ=ನಾರಾಯಣನ, ಚರಣ=ಪಾದಗಳ, ಧ್ಯಾನ=ಧ್ಯಾನವೆಂಬ, ಅಮೃತಂ=ಅಮೃತವುಳ್ಳದ್ದಾಗಿ, ವರ್ತತೆ=ಇರುವದು. ॥೬೪॥

ತಾ॥ ಎಲಾ ನೀಚನಾದ ಕಾಮನೆ, ನಿರರ್ಥಕವಾಗಿ ಟಂಕಾರವನ್ನು ಮಾಡುತ ಏಕೆ ಬಾಣವನ್ನು ವ್ಯರ್ಥಮಾಡಿಕೊಳ್ಳುವಿ ? ಎಲೆ ಕೋಗಿಲೆಯೆ, ನಿರರ್ಥಕವಾಗಿ ಕೂಗಿ ಕಂಠವನ್ನು ಏತಕ್ಕೆ ಶೋಷಣೆ ಮಾಡಿಕೊಳ್ಳುತ್ತೀಯೆ ? ಎಲೆ ಕಾಮಿನಿಯೆ, ಬಹು ಸುಂದರವಾದ ನಿನ್ನ ಕಟಾಕ್ಷಗಳನ್ನು ಏಕೆ ಚಮತ್ಕಾರವಾಗಿ ನಮ್ಮಲ್ಲಿ ಪ್ರಸರಣ ಮಾಡುವಿ ? ನನ್ನ ಮನಸ್ಸು ನಿರಂತರದಲ್ಲಿಯೂ ನಾರಾಯಣನ ಚರಣಧ್ಯಾನವೆಂಬ ಅಮೃತಪಾನದಿಂದ ಪೂರ್ಣಾನಂದದೊಳಿರುವಲ್ಲಿ ನಿಮ್ಮ ಸಂಬಂಧವಾದ ಅಲ್ಪಸುಖದಲ್ಲಿ ಆಸಕ್ತನಾಗುವೆನೆ ? ಬಾಬು ಕಾಲಕ್ಕೂ ಆಗೆನು. ನಾನು ಹರಿಕಿಂಕರನಲ್ಲದೆ ನಿಮ್ಮ ಕಿಂಕರನಲ್ಲವೆಂದು ತಿಳಿಯತಕ್ಕದ್ದು ॥೬೪॥

ಶ್ಲೋ॥ ವಿರಹೇಪಿಸಂಗಮಃಖಲುಪರಸ್ಪರ ಸಂಗತಂಮನೋಯೇಷಾಂ ।
ಹೃದಯಮಪಿವಿಘಟ್ಟತಂಚೇತ್ಸಂಗೋವಿರಹಂವಿಶೇಷಯತಿ ॥೬೫॥

ಟೀ॥ ವಿರಾಗದ ರೀತಿಯನ್ನು ಹೇಳುತ್ತಾನೆ—ಯೇಷಾಂ=ಯಾವ ಸ್ತ್ರೀ ಪುರುಷರಿಗೆ, ಮನಃ=ಮನಸ್ಸು, ಪರಸ್ಪರಸಂಗತಂ=ಅನ್ಯೋನ್ಯಾನುರಾಗವುಳ್ಳದ್ದೋ ತೇಷಾಂ=ಅವರುಗಳಿಗೆ, ವಿರಹೇಪಿ=ವಿಯೋಗದಲ್ಲಿಯೂ, ಸಂಗಮಃ=ಸಮಾಗಮವೇ, ಖಲು=ನಿಶ್ಚಯವು, ಹೃದಯಮಪಿ=ಮನಸ್ಸೂ, ವಿಘಟ್ಟತಂಚೇತ್=ವಿಘಟನೆಯನ್ನು ಹೊಂದಿದ್ದೇ ಆದರೆ, ಸಂಗಃ=ಸಮಾಗಮವು, ವಿರಹಂ=ವಿಯೋಗವನ್ನು, ವಿಶೇಷಯತಿ=ಹೆಚ್ಚಿಸುವದು. ... ... ॥೬೫॥

ತಾ॥ ಯಾವ ಸ್ತ್ರೀಪುರುಷರಿಗೆ ಮೊದಲು ಅನುರಾಗ ವಿಶೇಷದಿಂದ ಶರೀರಸಂಬಂಧ ಉಂಟಾಗಿರುವದೋ, ಅಂಥವರಿಗೆ ವಿರಹ ವುಂಟಾದಾಗ್ಯೂ ಆ ಮನಸ್ಸುಗಳು ಬೆರತಿರುವದರಿಂದ ಸಂಗಮವೆಂಬದು ತಪ್ಪಿಯಿಲ್ಲವು. ಆ ಮನಸ್ಸನ್ನು ನಿಯಮಿಸಿ ವೈರಾಗ್ಯಾಧೀನವನ್ನುಮಾಡಿದರೆ, ಆಗ ಮೊದಲು ಉಂಟಾಗಿದ್ದ ಸಂಗಮವು ತ್ಯಾಗಕ್ಕೂ, ಅನಭಿಮಾನಕ್ಕೂ ಕಾರಣವಾಗುವದೆಂದರಿಯುವುದು, .... .... ॥೬೫॥

ಶ್ಲೋ॥ ಕಿಂಗತೇನಯದಿಸಾನಜೀವತಿ ಪ್ರಾಣಿತಿಪ್ರಿಯತಮಾತಥಾಪಿಕಿಂ ।
ಇತ್ಯುದೀಕ್ಷ್ಯ ನವಮೇಘಮಾಲಿಕಾಂ ನಪ್ರಯಾತಿಪಥಿಕಸ್ಸ್ವ
ಮಂದಿರಂ .... .... ॥೬೬॥

ಟೀ॥ ಪ್ರವಾಸಿಯಾಗಿ ವಿರಕ್ತನಾಗಿರುವವನ ವೈರಾಗ್ಯವನ್ನು ಪ್ರಕಟಿಸುತ್ತಾನೆ—ಸಾ=ಆ, ಪ್ರಿಯತಮಾ=ವಲ್ಲಭೆಯು, ನಜೀವತಿಯದಿ=ವಿರಹದಿಂದ ಬದುಕದಿದ್ದರೆ, (ತದಾ=ಆಗ) ಗತೇನ=ಗಮನದಿಂದ, ಕಿಂ=ಏನು ಪ್ರಯೋಜನವು, ಪ್ರಾಣಿತಿ=ಬದುಕಿ ಇರುವಳು, ತಥಾಪಿ=ಹಾಗಾದರೂ, ಕಿಂ=ಏನು ಪ್ರಯೋಜನವು, ಇತಿ=ಈ ಪ್ರಕಾರ ವಿಚಾರಮಾಡಿ, ಪಥಿಕಃ=ಮಾರ್ಗಸ್ಥನು, ನವ=ಹೊಸದಾದ, ಮೇಘಮಾಲಿಕಾಂ=ಮೇಘಪಙ್ಕ್ತಿಯನ್ನು, ಉದೀಕ್ಷ್ಯ=ನೋಡಿ, ಸ್ವಮಂದಿರಂ=ತನ್ನ ಮನೆಯನ್ನು ಕುರಿತು, ನಪ್ರಯಾತಿ=ಹೋಗುವದಿಲ್ಲವು. ॥೬೬॥

ತಾ॥ ದೇಶಾಂತರದೊಳಿರುವ ಒಬ್ಬ ಮಾರ್ಗಸ್ಥನು ಹೇಳುತ್ತಾನೆ. ಈಗ ವರ್ಷಾಸಮಯವಾಗಿರುವದು, ಮನೆಯಲ್ಲಿ ನನ್ನ ವಲ್ಲಭೆಯು ವಿರಹವೇದನೆಯಿಂದ ಸತ್ತುಹೋಗಬಹುದು, ಹಾಗೆ ಸತ್ತುಹೋದರೆ ನಾನು ಹೋಗೋಣದರಿಂದೇನು ಫಲ? ಇಲ್ಲವೆ ಬದುಕಿಯೇ ಇದ್ದಳು, ಆಗಲೂ ನಾನು ಹೋಗಿ ಪ್ರಯೋಜನವಿಲ್ಲ? ಆದ್ದರಿಂದ ಹೋಗದೆ ಇಲ್ಲಿಯೇ ಇರುವದು ಲೇಸು; ಎಂದರೆ ಆಗತಕ್ಕದ್ದು ನಿಲ್ಲದು, ಆಗದ್ದು ಆಗದು ಎಂದಾಗಿ ನಿಶ್ಚಿತಬುದ್ಧಿಯುಳ್ಳವರಿಗೆ ಚಿಂತೆಯುಂಟಾಗದೆಂದು ಭಾವವು.

ಶ್ಲೋ॥ ವಿರಮತಬುಧಾಯೋಷಿತ್ಸಂಗಾತ್ಸುಖಾತ್ ಕ್ಷಣಭಂಗುರಾತ್ಕುರು
ತಕರುಣಾಮೈತ್ರೀಪ್ರಜ್ಞಾವಧೂಜನಸಂಗಮಂ ॥ ನಖಲುನರಕೇ
ಹಾರಾಕ್ರಾಂತಂಘನಸ್ತನಮಂಡಲಂ ಶರಣಮಥವಾಶ್ರೋಣೀಬಿಂ
ಬಂರಣನ್ಮಣಿಮೇಖಲಂ .... .... ॥೬೭॥

ಟೀ॥ ವಿವೇಕಿಗಳಿಗೆ ವೈರಾಗ್ಯವನ್ನುಪದೇಶಿಸುತ್ತಾನೆ—ಹೇಬುಧಾಃ=ಎಲೈ ವಿದ್ವಾಂಸರುಗಳಿರಾ, ಯೋಷಿತ್ಸಂಗಾತ್=ಅಂಗನಾ ಸಹವಾಸದ್ದೆಸೆಯಿಂದುಂಟಾದ, ಕ್ಷಣಭಂಗುರಾತ್=ಅತ್ಯಲ್ಪಕಾಲದೊಳು ನಾಶವಾಗುವ ಸುಖಾತ್=ಸುಖದ ದೆಸೆಯಿಂದ, ವಿರಮತ=ಸುಮ್ಮನಿರಿ, ಕರುಣಾ=ದಯೆಯು, ಮೈತ್ರೀ=ಸ್ನೇಹವು, ಪ್ರಜ್ಞಾ=ಬುದ್ಧಿವಿಶೇಷವು ಎಂಬ ವಧೂಜನ=ಸ್ತ್ರೀಜನರ, ಸಂಗಮಂ=ಸಂಬಂಧವನ್ನು, ಕುರುತ=ಮಾಡಿರಿ, ನರಕೇ=ನರಕದಲ್ಲಿ, ಹಾರ=ಮುಕ್ತಾಹಾರದಿಂದ, ಆಕ್ರಾಂತಂ=ಕೂಡಿರುವ, ಘನಸ್ತನಮಂಡಲಂ=ನಿಬಿಡವಾದ ಕುಚಭಾರವು, ಅಥವಾ=ಇಲ್ಲವೆ, ರಣತ್=ಧ್ವನಿಸಿ[illegible]ವ, ಮಣಿಮೇಖಲಂ=ಮಣಿಖಚಿತವಾದ ಡಾಬುಳ್ಳ, ಶ್ರೋಣೀಬಿಂಬಂ=ಕಟಿಪ್ರದೇಶವಾಗಲಿ, ಶರಣಂ=ರಕ್ಷಕವು, ನ=ಆಗುವದಿಲ್ಲವು ॥೬೭॥

ತಾ॥ ಎಲೈ ವಿದ್ವಜ್ಜನರುಗಳಿರಾ! ಕ್ಷಣಕಾಲದೊಳು ನಾಶವಾಗಿ ಹೋಗುವ ಸ್ತ್ರೀಸಂಬಂಧದಿಂದುಂಟಾಗುವ ಅಲ್ಪಸುಖಕ್ಕೋಸ್ಕರ ಆಸಕ್ತರಾಗಿ ಕೆಡುವಿರಿ, ಬೇಡ. ದುಃಖಿಗಳಲ್ಲಿ ದಯೆಯೂ, ಸುಕೃತಿಗಳಲ್ಲಿ ಸ್ನೇಹವೂ, ವಿಶೇಷವಾದ ಪ್ರಜ್ಞೆಯೂ ಇವುಗಳ ಪರಿಶೀಲನೆಯಲ್ಲಿ ಆಸಕ್ತರಾಗಿರಬಾರದೆ? ಕಾಮಿನಿಯರ ಕಚಕುಚಕಟಿಪ್ರದೇಶಗಳನ್ನು ನಂಬಿಕೊಂಡಿದ್ದರೆ ಯಮನವರು ಬಂದು ಎಳೆದೊಯ್ಯುವ ಸಮಯದೊಳು ಇವುಗಳೆಲ್ಲ ಆ ನರಕದಲ್ಲಿ ರಕ್ಷಿಸುವವೇ? ಒಂದುಕಾಲಕ್ಕೂ ರಕ್ಷಿಸವು. ಆದುದರಿಂದಲೇ ವೈರಾಗ್ಯವನ್ನು ಸೇವಿಸಿರಿ. .... .... .... ॥೬೭॥

ಶ್ಲೋ॥ ಯದಾಯೋಗಾಭ್ಯಾಸವ್ಯಸನಕೃಶಯೋರಾತ್ಮಮನಸೋರವಿಚ್ಛಿ
ನ್ನಾಮೈತ್ರೀಸ್ಫುರತಿಕೃತಿನಸ್ತಸ್ಯಕಿಮುತೈಃ । ಪ್ರಿಯಾಣಾಮಾ
ಲಾಪೈರಧರಮಧುಭಿರ್ವಕ್ತ್ರವಿಧುಭಿಸ್ಸನಿಶ್ವಾಸಾಮೋದೈಸ್ಸಕು
ಚಕಲಶಾಶ್ಲೇಷಸುರತೈಃ .... .... ॥೬೮॥

ಟೀ॥ ಹಿಂದೆ ಸಾಂಖ್ಯಮತರೀತಿಯಿಂದ ವೈರಾಗ್ಯವನ್ನು ಹೇಳಿ ಯೋಗಮತಾನುಸಾರವಾಗಿ ಹೇಳುತ್ತಾನೆ— ಯದಾ=ಯಾವಾಗ, ಯಸ್ಯ=ಯಾವನ, ಯೋಗಾಭ್ಯಾಸ=ಯೋಗಾಭ್ಯಾಸದಲ್ಲಿ, ವ್ಯಸನ=ಆಸಕ್ತಿಯಿಂದ, ಕೃಶಯೋಃ=ಸೂಕ್ಷ್ಮಗಳಾದ, ಆತ್ಮಮನಸೋಃ=ಆತ್ಮಮನಸ್ಸುಗಳಿಗೆ, ಮೈತ್ರೀ=ಸುಕೃತಿಗಳಲ್ಲಿಸ್ನೇಹವು, ಸ್ಫುರತಿ=ಪ್ರಕಾಶಿಸುವದೊ, ತದಾ=ಆಗ, ತಸ್ಯಕೃತಿನಃ=ಆ ಧನ್ಯನಿಗೆ, ತೈಃ=ಆ, ಪ್ರಿಯಾಲಾಪೈಃ=ವಲ್ಲಭೆಯರ ಇಂಪಾದ ನುಡಿಗಳಿಂದ, ಅಧರಮಧುಭಿಃ=ಅಧರಾಮೃತಗಳುಳ್ಳ ಸನಿಶ್ವಾಸಾಮೋದೈಃ=ಮುಖಮಾರುತ ಸುವಾಸನೆಗಳಿಂದ ಸಹಿತವಾದ, ವಕ್ತ್ರವಿಧುಭಿಃ=ಮುಖಚಂದ್ರರಿಂದಲೂ, ಸಕುಚಕಲಶಾಶ್ಲೇಷ=ಕುಚಾಲಿಂಗನೆಗಳಿಂದ ಸಹಿತವಾದ, ಸುರತೈಃ=ಸಂಭೋಗವಿಶೇಷಗಳಿಂದಲೂ, ಕಿಂ=ಏನುಪ್ರಯೋಜನವು॥

ತಾ॥ ಯಾವನಿಗಾಗಲೀ ಅಷ್ಟಾಂಗಯೋಗಾಭ್ಯಾಸ ಪರಿಶೀಲನೆಯಿಂದ ಆತ್ಮ ಮನಸ್ಸುಗಳು ನಿಯಮಿಸಲ್ಪಟ್ಟು, ವೈರಾಗ್ಯವು ಒಲಿತು, ಮೈತ್ರೀ ಕರುಣಾದಿಗಳು ಹೆಚ್ಚುವವೋ, ಅಂಥವನಿಗೆ ಬ್ರಹ್ಮಾನಂದಾನುಭವ ಉಂಟಾಗಿರುವಲ್ಲಿ ಸತಿಯರ ಮಧುರವಾದ ನುಡಿಗಳಲ್ಲಿ ಯಾಗಲಿ, ಅಧರಾಮೃತಗಳಿಂದ ಕೂಡಿ ಕಮಲಗಂಧದಂತೆ ಸುವಾಸನೆಯುಳ್ಳ ಮುಖಮಾರುತದಿಂದ ಶೋಭಿಸುವ ಮುಖಗಳಲ್ಲಿ ಯಾಗಲಿ, ಕುಚಕುಂಭಾದ್ಯಾಲಿಂಗನಗಳಿಂದೊಡಗೂಡಿದ ಸಂಭೋಗ ವಿಶೇಷಗಳಲ್ಲಿಯೇ ಆಗಲಿ, ಒಂದುಕಾಲಕ್ಕೂ

ದರೂ ಆಶೆಯುಂಟಾಗುವದುಂಟೆ ? ಸಕ್ಕರೆಯಿಂದೊಡಗೂಡಿ ಸವಿಯಾದ ಹಾಲು ಸಿದ್ಧವಾಗಿರಲು, ಕಲಗಚ್ಚಿನ ನೀರನ್ನು ಕುಡಿಯಲು ಕೀಳಸಿಗಾದರೂ ಮನಬರುವದುಂಟೆ ? ಬಂಬಾರಗೆಂದರಿಯುವದು .... ||೬೮||

ಶ್ಲೋ|| ಯದಾಸೀದಜ್ಞಾನಂಸ್ಮರತಿಮಿರಸಂಚಾರಜನಿತಂ ತದಾದೃಷ್ಟಂನಾ
ರೀಮಯಮಿದಮಶೇಷಂಜಗದಿತಿ || ಇದಾನೀಮಸ್ಮಾಕಂಪಟುತರ
ವಿವೇಕಾಂಜನಜುಷಾಂ ಸಮೀಭೂತಾದೃಷ್ಟಿಸ್ತ್ರಿಭುವನಮಪಿಬ್ರ
ಹ್ಮಮನುತೇ .... .... ||೬೯||

ಟೀ|| ವೇದಾಂತರೀತಿಯಿಂದ ವೈರಾಗ್ಯವಂ ವರ್ಣಿಸುತ್ತನೆ—ಯದಾ=ಯಾವಾಗ, ಸ್ಮರ=ಕಾಮನೆಂಬ, ತಿಮಿರ=ನೇತ್ರರೋಗದ ಕತ್ತಲೆಯಲ್ಲಿ, ಸಂಚಾರ=ವ್ಯಾಪ್ತಿಯಿಂದ, ತಿರುಗುವಿಕೆಯಿಂದ, ಜನಿತಂ=ಉಂಟಾದ, ಅಜ್ಞಾನಂ=ಅವಿವೇಕವು, ಆಸೀತ್=ಉಂಟಾಯಿತೋ, ತದಾ=ಆಗ, ಅಶೇಷಂ=ಸಮಸ್ತವಾದ, ಇದಂ=ಈ, ಜಗತ್=ಪ್ರಪಂಚವು, ನಾರೀಮಯಂ=ಕಾಮಿನೀ ವಿಕಾರವಾದದ್ದು. ಇತಿ=ಹೀಗೆಂದು, ದೃಷ್ಟಂ=ನೋಡಲ್ಪಟ್ಟಿತು, ಇದಾನೀಂ=ಈಗ, ಪಟುತರ=ಸಮರ್ಥವಾದ, ವೈವೇಕ=ರೋಗನಿವಾರಣದಲ್ಲಿ ಚತುರವಾದ, ವಿವೇಕ=ತತ್ವಜ್ಞಾನವೆಂಬ ಅಂಜನ=ನೇತ್ರಕಲ್ಯಾಣವೆಂಬ ಸಿದ್ಧಾಂಜನವನ್ನು, ಜುಷಾಂ=ಹೊಂದಿರುವ, ಅಸ್ಮಾಕಂ=ನಮ್ಮಗಳ, ದೃಷ್ಟಿಃ=ಬುದ್ಧಿಯು, ಕಣ್ಣು, ಸಮೀಭೂತಾ=ಸ್ವಭಾವವನ್ನು ಹೊಂದಿರುವದಾಗಿ, ತ್ರಿಭುವನಂ=ಮೂರುಲೋಕಸಮುದಾಯವನ್ನು, ಬ್ರಹ್ಮ=ಪರಮಾತ್ಮರೂಪವಾದದ್ದನ್ನಾಗಿ, ಮನುತೇ=ತಿಳಿಯುತ್ತದೆ. ||೩೮||

ತಾ|| ಯಾವಾಗಲಾದರೆ ನಮ್ಮ ಕಣ್ಣುಗಳೂ, ಮತಿಯೂ ಕಾಮವಿಕಾರವೆಂಬ ಅಂಧಕಾರದಿಂದಲೂ, ನೇತ್ರರೋಗದಿಂದಲೂ ಪೀಡಿತವಾದವೋ, ಆಗಲೇ ಪ್ರಪಂಚವೆಲ್ಲವೂ ಸ್ತ್ರೀಮಯವಾಗಿರುವದಲ್ಲದೆ ಮತ್ತೊಂದು ಬಗೆಯಾಗಿಲ್ಲವೆಂದು ನಿಶ್ಚಯಿಸಿದೆವು. ಈಗಲಾದರೋ, ಕತ್ತಲೆಯುನ್ನು, ರೋಗವನ್ನೂ ನಿವಾರಣೆ ಮಾಡುವದರಲ್ಲಿ ಸಮರ್ಥವಾದ ತತ್ವಜ್ಞಾನವೆಂಬ ಬೆಳಕು, ನೇತ್ರಕಲ್ಯಾಣವೆಂಬ ಅಂಜನವು ಲಭಿಸಿತಾದ ಕಾರಣವೇ ಮತಿಯೂ ನಯನವೂ ಶುದ್ಧವಾಯಿತಾಗಿ ಪ್ರಪಂಚವೆಲ್ಲವನ್ನು ಬ್ರಹ್ಮಮಯವಾಗಿ ನೋಡುತಲಿರುವೆವು. ಹೀಗೆ ವಿವೇಕವು ಶ್ರೇಯಸ್ಸಿಗೆ ಕಾರಣವಾದುದರಿಂದ ಅದನ್ನು ಸಂಪಾದಿಸುವದರಲ್ಲಿ ಎಲ್ಲರೂ ಪ್ರಯತ್ನ ಪಡಬೇಕೆಂದಾಶಿಸುವೆವು .... .... ||೬೯||

ಶ್ಲೋ॥ ತಾವದೇವ ಕೃತಿನಾಮಪಿ ಸ್ಫುರತ್ಯೇಷ ನಿರ್ಮಲವಿವೇಕದೀಪಕಃ ।
ಯಾವದೇವ ನ ಕುರಂಗಚಕ್ಷುಷಾಂ ತಾಡ್ಯತೇ ಚಟುಲಲೋಚನಾಂಚಲೈಃ॥ .... .... ॥೨೦॥

ಟೀ॥ ಇನ್ನು ದುರ್ವಿರಕ್ತರ ಮಾರ್ಗವನ್ನು ಹೇಳುತ್ತಾನೆ—ತಾವದೇವ= ಅದುವರೆಗೇ, ಕೃತಿನಾಮಪಿ=ಕುಶಲರಿಗೂ, ಏಷಃ=ಈ ಮೇಲೆ ಹೇಳಿದ, ನಿರ್ಮಲ= ನಿಷ್ಕಳಂಕವಾದ, ವಿವೇಕ=ತತ್ವವಬೋಧವೆಂಬ, ದೀಪಕಃ=ಬೆಳಕು, ಸ್ಫುರತಿ= ಹೊಳೆಯುವದು, ಕುರಂಗಚಕ್ಷುಷಾಂ=ಹರಿಣಾಕ್ಷಿಯರ, ಚಟುಲ=ಚಪಲವಾದ, ಲೋಚನಾಂಚಲೈಃ=ಕಟಾಕ್ಷವೀಕ್ಷಣಗಳಿಂದ, ಯಾವದೇವ = ಎಷ್ಟರವರೆಗೂ, ನತಾಡ್ಯತೇ=ಹೊಡಿಯಲ್ಪಡುವದಿಲ್ಲವೊ? .... .... ॥೨೦॥

ತಾ॥ ಲೋಕದೊಳು ಮನುಷ್ಯನೆಷ್ಟು ವಿವೇಕಿಯಾಗಿದ್ದರೂ ಕಾಮಿನೀ ಕಟಾಕ್ಷವೀಕ್ಷಣೆಗೆ ಪಾತ್ರನಾಗುವವರಿಗೆ ಅವನ ವಿವೇಕವು ಪ್ರಕಾಶಿಸುವದಲ್ಲದೆ ತರುವಾಯ ಕ್ಷಣಕಾಲವೂ ಪ್ರಕಾಶಿಸದೆಂದಾಶಯವು ॥೨೦॥

ಶ್ಲೋ॥ ವಚಸಿ ಭವತಿ ಸಂಗತ್ಯಾಗಮುದ್ದಿಶ್ಯ ವಾರ್ತಾ ಶ್ರುತಿಮುಖರಮುಖಾನಾಂ ಕೇವಲಂ ಪಂಡಿತಾನಾಂ॥ ಜಘನಮರುಣರತ್ನಗ್ರಂಥಿಕಾಂಚೀಕಲಾಪಂ ಕುವಲಯನಯನಾನಾಂ ಕೋ ವಿಹಾತುಂ ಸಮರ್ಥಃ ॥೨೧॥

ಟೀ॥ ದುರ್ವಿರಕ್ತ ವೈರಾಗ್ಯವು ವಚನಮಾತ್ರದಲ್ಲಿರುವದೆಂದು ಹೇಳುತ್ತಾನೆ— ಶ್ರುತಿ=ವೇದಗಳಿಂದ, ಮುಖರ = ಶಬ್ದಯುಕ್ತಗಳಾದ, ಮುಖಾನಾಂ=ವದನಗಳಳ್ಳ, ಪಂಡಿತಾನಾಂ=ವಿದ್ವಾಂಸರಿಗೆ, ವಚಸಿ ಕೇವಲಂ=ವಾಕ್ಯದಲ್ಲಿ ಮಾತ್ರವೆ, ಸಂಗತ್ಯಾಗಮುದ್ದಿಶ್ಯ=ಅಂಗನಾಸಂಗತ್ಯಾಗವನ್ನು ಕುರಿತು, ವಾರ್ತಾ=ಸುದ್ದಿ, ಭವತಿ=ಉಂಟಾಗುವದು. ಅರುಣರತ್ನಗ್ರಂಥಿ=ಪದ್ಮರಾಗಮಣಿಖಚಿತವಾದ, ಕಾಂಚೀ=ಡಾಬೆಂಬ, ಕಲಾಪಂ=ಭೂಷಣವುಳ್ಳ, ಕುವಲಯನಯನಾನಾಂ=ಇಂದೀವರಾಕ್ಷಿಯರ, ಜಘನ=ಕಟಿಪುರೋಭಾಗವನ್ನು, ವಿಹಾತುಂ=ಬಿಡುವದಕ್ಕೆ, ಕಃ=ಯಾವನು, ಸಮರ್ಥಃ=ಶಕ್ತನು. .... .... ॥೨೧॥

ತಾ॥ ವೇದವೇದಾಂಗಾದಿ ವಿದ್ಯೆಗಳನ್ನೋದಿ ಎಷ್ಟು ಪಂಡಿತನಾಗಿದ್ದರೂ ಸ್ತ್ರೀಸಂಗ ತ್ಯಾಗವನ್ನು ಕುರಿತು ವಿರಾಗವೆಂಬುವದು ವಾಕ್ಯದಲ್ಲಿ ಮಾತ್ರ ದೃಢವಾಗಿರುವದಲ್ಲದೆ ಮನಸ್ಸಿನಲ್ಲಿ ತ್ಯಾಗವೆಂದಿಗೂ ಉಂಟಾಗಲಾರದು. ರಮಣೀಯವಾಗಿರುವ ಪದ್ಮರಾಗ ಮಣಿಗಳಿಂದ ಖಚಿತವಾದ ಒಡ್ಯಾಣವೆಂಬಾಭರಣದಿಂದತಿಮನೋಹರವಾದ ಕಾಮಿನಿಯ ಕಟಿಪುರೋಭಾಗವನ್ನು ತ್ಯಜಿಸಲು ಯಾವನಾದರೂ ಶಕ್ತನಾಗುವನೆ? ಒಂದು ಕಾಲಕ್ಕೂ ಸಮರ್ಥನಾಗಲಾರನು. .... .... ॥೨೧॥

ಶ್ಲೋ॥ ಸಪರಪ್ರತಾರಕೋಽಸೌ ನಿಂದತಿ ಯೋಽಳೀಕಪಂಡಿತೋ ಯುವತೀಃ ।
ಯಸ್ಮಾತ್ತಪಸೋಽಪಿ ಫಲಂ ಸ್ವರ್ಗಃ ಸ್ವರ್ಗೇಽಪಿ ಚಾಪ್ಸರಸಃ ॥೩೧॥

ಟೀ॥ ಯಃ=ಯಾವ ವಿದ್ವಾಂಸನು, ಯುವತೀಃ=ತರುಣಿಯರನ್ನು, ನಿಂದತಿ=ನಿಂದಿಸುವನೋ, ಸಃ=ಅವನು, ಪರ=ಇತರರನ್ನು, ಪ್ರತಾರಕಃ=ವಂಚಿಸುವ ಅಳೀಕಪಂಡಿತಃ=ಅನೃತವಾದ ವಿದ್ವಾಂಸನು, ಯಸ್ಮಾತ್ — ಯಾವ ಕಾರಣದ್ದೆಸೆಯಿಂದ, ತಪಸಃ=ಚಾಂದ್ರಾಯಣಾದಿ ತಪಸ್ಸಿಗೆ, ಫಲಂ=ಫಲವು, ಸ್ವರ್ಗಃ=ಸ್ವರ್ಗಲೋಕವೋ, ಸ್ವರ್ಗೇಽಪಿ=ಆ ಸ್ವರ್ಗದಲ್ಲಿಯೂ, ಅಪ್ಸರಸಃ=ಅಪ್ಸರಸ್ತ್ರೀಯರೋ॥೩೧॥

ತಾ॥ ಛಿ! ತರುಣಿಯರು ಅನರ್ಥಕ್ಕೆ ಕಾರಣವಾದರು, ಅವರ ಸಂಬಂಧವು ಬಹುನಿಂದ್ಯವಾದದ್ದು ಎಂಬದಾಗಿ ಯಾವನಾದರೆ ನಾರಿಯರನ್ನು ನಿಂದಿಸುವನೋ, ಖಂಡಿತವಾಗಿಯೂ ಅವನು ನಿಜವಾದ ಪಂಡಿತನಲ್ಲವು. ಏಕೆಂದರೆ, ಚಾಂದ್ರಾಯಣವೇ ಮೊದಲಾದ ವ್ರತೋಪವಾಸಾದಿಗಳೆಲ್ಲಕ್ಕೂ ಸ್ವರ್ಗವೇ ಫಲವಾಗಿರುವದು: ಆ ಸ್ವರ್ಗಕ್ಕೆ ಹೋದರೆ ರಂಭಾದ್ಯಪ್ಸರಸ್ತ್ರೀಯರೇ ಅಲ್ಲಿರುವರು. ಅವರ ಸಂಭಂದವೆ ಅಲ್ಲಿನ ಸುಖವೂ ಆಗಿರುವದು, ಆದುದರಿಂದಲೆ ಸತಿಯ ಸಂಬಂಧವು ದೂಷ್ಯವಲ್ಲವೆಂದರಿವುದು.

ಶ್ಲೋ॥ ಮತ್ತೇಭಕುಂಭದಳನೇ ಭುವಿ ಸಂತಿ ಧೀರಾಃ ಕೇಚಿತ್ಪ್ರಚಂಡಮೃಗ
ರಾಜವಧೇಽಪಿ ದಕ್ಷಾಃ ॥ ಕಿಂತು ಬ್ರವೀಮಿ ಬಲಿನಾಂ ಪುರತಃ ಪ್ರಸಹ್ಯ
ಕಂದರ್ಪದರ್ಪದಳನೇ ವಿರಳಾ ಮನುಷ್ಯಾಃ .... ॥೩೨॥

ಟೀ॥ ಕಾಮನು ಜಯಿಸಲಶಕ್ಯನೆಂದು ಹೇಳುತ್ತಾನೆ— ಭುವಿ=ಭೂಲೋಕದಲ್ಲಿ, ಮತ್ತ=ಮದಿಸಿದ, ಇಭ=ಆನೆಗಳ, ಕುಂಭ=ಕುಂಭಸ್ಥಳವನ್ನು, ದಳನೇ=ಸೀಳುವದರಲ್ಲಿ, (ಶಕ್ತಾಃ ಸಮರ್ಥರಾದ) ಧೀರಾಃ=ಶೂರರು, ಸಂತಿ=ಇರುವರು, ಕೇಚಿತ್=ಮತ್ತೆ ಕೆಲಬರು, ಪ್ರಚಂಡ=ಉದ್ದಂಡವಾದ, ಮೃಗರಾಜ=ಸಿಂಹಗಳ, ವಧೇಽಪಿ=ಸಂಹಾರದಲ್ಲಿಯೂ, ದಕ್ಷಾಃ=ಸಮರ್ಥರು, ಸಂತಿ=ಇರುವರು, ಕಿಂತು=ಮತ್ತೇನದರೆ, ಬಲಿನಾಂ=ಬಲಿಷ್ಠರಾದ ಜ್ಞಾನಬಲವುಳ್ಳವರ, ಪುರತಃ=ಮುಂದೆ, ಬ್ರವೀಮಿ=ಹೇಳುವೆನು, ಪ್ರಸಹ್ಯ=ಬಲತ್ಕಾರವಾಗಿ, ಕಂದರ್ಪ=ಮನ್ಮಥನ ದರ್ಪ=ಮದವನ್ನು, ದಳನೇ=ಸೀಳುವದರಲ್ಲಿ, ಸಮರ್ಥಾಃ=ಶಕ್ತರಾದ, ಮನುಷ್ಯಾಃ=ಮನುಜರು, ವಿರಳಾಃ=ಅಪೂರ್ವವು. ... .... ॥೩೨

ತಾ॥ ಲೋಕದೊಳು ಮದ್ದಾನೆಗಳ ತಲೆಯನ್ನು ಒಡೆಯುತಕ್ಕ ಶೂರರು ಅನೇಕರಿರುವರು. ಪ್ರಚಂಡವಾದ ಸಿಂಹಗಳನ್ನು ಸಂಹಾರವ

ಡುವ ವೀರರೂ ಬಹುಮಂದಿಉಂಟು. ಜ್ಞಾನಬಲ, ದೇಹಬಲ ಇವೆರಡ ರಿಂದಲೂ ಕೂಡಿರುವ ಮಹನೀಯರ ಮುಂದೆ ಇಗೋ ಕೈಯೆತ್ತಿ ಘಂಟಾಘೋಷದಂತೆ ಹೇಳುವೆನು, ಕಾಮನ ಕೊಬ್ಬನ್ನು ಅಣಗಿಸುವ ಎಂದರೆ ಮನ್ಮಥನನ್ನು ಜಯಿಸುವ ಶೂರನು ಮಾತ್ರ ಬಹು ಅಪೂರ್ವ. ಎಂದರೆ ಕಾಮವಿಕಾರವನ್ನು ಗೆಲ್ಲುವದು ಕಷ್ಟವೆಂದಾಶಯವು ॥೭೩॥

ಶ್ಲೋ॥ ಸನ್ಮಾರ್ಗೇತಾವದಾಸ್ತೇಪ್ರಭವತಿಚ ನರಸ್ತಾವದೇವೇಂದ್ರಿಯಾಣಾಂಲಜ್ಜಾಂತಾವದ್ವಿಧತ್ತೇವಿನಯಮಪಿ ಸಮಾಲಂಬತೇತಾವದೇವ॥ ಭ್ರೂಚಾಪಾಕೃಷ್ಟಮುಕ್ತಾಃಶ್ರವಣಪಥಗತಾನೀಲಪಕ್ಷ್ಮಾಣಏತೇಯಾವಲ್ಲೀಲಾವತೀನಾಂಹೃದಿನಧೃತಿಮುಷೊದೃಷ್ಟಿಬಾಣಾಃಪತಂತಿ .... .... .... ॥೭೪॥

ಟೀ॥ ಇನ್ನೊಂದು ಬಗೆಯಾದ ವಿಚಿತ್ರರಚನೆಯನ್ನು ಹೇಳುತ್ತಾನೆ. ಭ್ರೂ=ಕಣ್ಣುಹುಬ್ಬೆಂಬ, ಚಾಪ=ಬಿಲ್ಲಿನಿಂದ, ಆಕೃಷ್ಟ=ಎಳೆಯಲ್ಪಟ್ಟ, ಮುಕ್ತಾಃ=ಬಿಡಲ್ಪಟ್ಟ, ಶ್ರವಣಪಥಗತಾಃ=ಶ್ರೋತ್ರಮಾರ್ಗವನ್ನು ಹೊಂದಿರುವ, ನೀಲಪಕ್ಷ್ಮಾಣಃ=ಕಪ್ಪಾದ ರೆಪ್ಪೆಗಳು, (ಪಕ್ಷ್ಮಗಳು ಉಳ್ಳ) ಧೃತಿಮುಷಃ=ಧೈರ್ಯಾಪಹಾರಿಗಳಾದ, ಏತೆ=ಈ ಹಿಂದೆ ಹೇಳಿದ, ಲೀಲಾವತೀನಾಂ=ವಿಲಾಸಿನಿಯರ, ದೃಷ್ಟಿಬಾಣಾಃ=ಕಟಾಕ್ಷಗಳೆಂಬ ಬಾಣಗಳು, ಯಾವತ್=ಎಷ್ಟರವರೆಗೂ, ಹೃದಿ=ಮನಸ್ಸಿನಲ್ಲಿ, ಎದೆಯಲ್ಲಿ, ನಪತಂತಿ=ಬೀಳುವದಿಲ್ಲವೋ, ತಾವತ್=ಅದುವರೆಗೂ, ನರಃ=ಮನುಷ್ಯನು, ಸನ್ಮಾರ್ಗೇ=ವೇದೋಕ್ತವಾದ ಆಚಾರದಲ್ಲಿ, ಆಸ್ತೇ=ಇರುವನು, ಇಂದ್ರಿಯಾಣಾಂ=ಚಕ್ಷುರಾದೀಂದ್ರಿಯಗಳಿಗೆ, ತಾವದೇವ=ಅದುವರೆಗೇ, ಪ್ರಭವತಿ=ಯಜಮಾನನಾಗಿರುವನು, ಲಜ್ಜಾಂ=ಕೆಟ್ಟಕೆಲಸ ಮಾಡುವದರಲ್ಲಿ ನಾಚಿಕೆಯನ್ನು, ತಾವತ್=ಅದುವರಿಗೇ. ವಿಧತ್ತೆ=ಧರಿಸುವನು, ವಿನಯಮಪಿ=ವಿಧೇಯತೆಯನ್ನು, ತಾವದೇವ=ಅದುವರಿಗೇನೆ, ಸಮಾಲಂಬತೆ=ಆಶ್ರಯಿಸಿರುವನು. ... ॥೭೪॥

ತಾ॥ ಲೋಕದೊಳು ಎಷ್ಟು ಶೂರನಾದಾಗ್ಯೂ ಅಂಥವನ ಧೈರ್ಯವನ್ನು ಧ್ವಂಸಮಾಡುವ ಹರಿಣನಯನೆಯರಾದ ತರುಣಿಯರ ಕಟಾಕ್ಷಗಳೆಂಬ ಬಾಣಗಳಿಗೆ ಇವನು ಗೋಚರವಾಗದೆ ಇರುವವರೆಗೂ ಅತನು ಸದಾಚಾರ ಸಂಪನ್ನನಾಗಿಯೂ, ಕಣ್ಣು ಮೊದಲಾದ ಇದ್ರಿಯಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವವನಾಗಿಯೂ, ಕೆಟ್ಟ ಕೆಲಸದಲ್ಲಿ ಪ್ರವರ್ತಿಸುವದಕ್ಕೆ ನಾಚಿಕೆಪಡುವವನಾಗಿಯೂ, ವಿನಯಸಂಪತ್ತಿಯಿಂದೊಡಗೂಡಿದವನಾಗಿಯೂ ಇರುವನು. ಎಂದರೆ ಕಾಮಿನಿಯ ಕಟಾಕ್ಷಕ್ಕೆ ಪಾ

ತ್ರನಾದ ಒಡನೆಯೇ ಸದಾಚಾರ, ವಿನಯ, ನಾಚಿಕೆ, ಧೈರ್ಯ ಇವೆ ಲ್ಲವೂ ನಷ್ಟವಾಗುವವೆಂದು ಭಾವವು. .... ||೭೪||

ಶ್ಲೋ|| ಉನ್ಮತ್ತಪ್ರೇಮಸಂರಂಭಾದಾರಭಂತೇಯದಂಗನಾಃ || ತತ್ರ
ಪ್ರತ್ಯೂಹಮಾಧಾತುಂಬ್ರಹ್ಮಾಪಿಖಲುಕಾತರಃ ||೭೫||

ಟೀ|| ಅಂಗನಾ = ಕಾಮಿನಿಯರು, ಉನ್ಮತ್ತ=ಅತ್ಯಧಿಕವಾದ, ಪ್ರೇಮ= ಅನುರಾಗದ, ಸಂರಂಭಾತ್=ಸಂಭ್ರಮದ ದೆಸೆಯಿಂದ, ಯತ್=ಯಾವ ಕೆಲಸವನ್ನು, ಆರಭಂತೆ=ಪ್ರಾರಂಭಿಸುವರೋ, ತತ್ರ=ಆ ಕೆಲಸದಲ್ಲಿ, ಪ್ರತ್ಯೂಹಂ=ವಿಘ್ನವನ್ನು, ಆಧಾತುಂ=ಉಂಟುಮಾಡುವುದಕ್ಕೆ, ಬ್ರಹ್ಮಾಪಿ=ಚತುರ್ಮುಖನೂ, ಕಾತರಃ=ಭಯಪಡುವನು, ಖಲು=ನಿಶ್ಚಯವು. .... ||೭೫||

ತಾ|| ಕಾಮಿನಿಯರು ಅನುರಾಗದಿಂದಲೂ, ಸಂಭ್ರಮದಿಂದಲೂ ಯಾವ ಕೆಲಸವನ್ನಾದರೆ ಮಾಡಬೇಕೆಂದಾರಂಭಿಸುವರೋ ಅಂಥಾ ಕೆಲಸದಲ್ಲಿ ವಿಘ್ನವನ್ನಾಚರಿಸಲು ಸೃಷ್ಟಿಕರ್ತನಾದ ಚತುರಾನನನು ಕೂಡ ಅಸಮರ್ಥನು, ಹೀಗಿರುವಲ್ಲಿ ಇನ್ನಿತರರ ಪಾಡೇನು ? ಎಂದರೆ ಅಂಗನೆಯರಿಗೆ ಅಶೇಷರೂ ಅಧೀನರೆಂದಾಶಯವು. .... .... ||೭೫||

ಶ್ಲೋ|| ತಾವನ್ಮಹತ್ವಂಪಾಂಡಿತ್ಯಂಕುಲೀನತ್ವಂವಿವೇಕಿತಾ || ಯಾವ
ಜ್ಜ್ವಲತಿನಾಂಗೇಷುಹತಃಪಂಚೇಷುಪಾವಕಃ ||೭೬||

ಟೀ|| ಯಾವತ್=ಎಷ್ಟರವರೆಗೆ, ಹತಃ=ನೀಚವಾದ, ಪಂಚೇಷು=ಕಾಮನೆಂಬ, ಪಾವಕಃ=ಅಗ್ನಿಯು, ಅಂಗೇಷು=ಅವಯವಗಳಲ್ಲಿ, ನಜ್ವಲತಿ=ಉರಿಯುವುದಿಲ್ಲವೊ, ತಾವತ್=ಅದುವರೆಗೂ, ಮಹತ್ವಂ=ಮಹಿಮೆಯು, ಪಾಂಡಿತ್ಯಂ=ವಿದ್ಯಾಬಲವು, ಕುಲೀನತ್ವಂ=ಸತ್ಕುಲಪ್ರಸೂತತ್ವವು, ವಿವೇಕಿತಾ=ವಿವೇಕವು. ||೭೬||

ತಾ|| ಕಾಮವಿಕಾರವೆಂಬ ಬೆಂಕಿಯು ಪುರುಷನ ಹೃದಯದೊಳು ಹತ್ತಿಕೊಂಡು ಬೇಯುವವರೆಗೂ ಇವನಿಗೆ ಮಹಿಮೆ, ಕುಲೀನತ್ವ, ಪಾಂಡಿತ್ಯ, ಉತ್ತಮವಾದ ವಿವೇಕ, ಇವೆಲ್ಲವೂ ಇರುವವು. ಎಂದರೆ ಪಾಂಡಿತ್ಯ, ಉತ್ತಮವಾದ ವಿವೇಕ, ಇವೆಲ್ಲವೂ ನಾಶವಾಗುವವೆಂದು ಭಾವವು. .... .... .... ||೭೬||

ಶ್ಲೋ|| ಶಾಸ್ತ್ರಜ್ಞೋಪಿಪ್ರಗುಣಿತನಯೋಽಪ್ಯಾತ್ತಬೋಧೋಪಿಬಾಢಾ
ಸಂಸಾರೇಸ್ಮಿನ್ಭವತಿವಿರಳೋಭಾಜನಂಸದ್ಗತೀನಾಂ || ಯೇನೈ

ತಸ್ಮಿನ್ನಿರಯನಗರದ್ವಾರಮುದ್ಘಾಟಯಂತೀ ವಾಮಾಕ್ಷೀಣಾಂ ಭವತಿ ಕುಟಿಲಭ್ರೂಲತಾ ಕುಂಚಿಕೇವ .... ॥೨೩॥

ಟೀ॥ ಸಂಸಾರಿಯಾದವನಿಗೆ ಸದ್ಗತಿಯು ದುರ್ಲಭವೆಂಬುವದರಲ್ಲಿ ಕಾರಣವನ್ನು ತೋರಿಸುತ್ತಾನೆ — ಶಾಸ್ತ್ರಜ್ಞೋಪಿ=ವಿದ್ಯಾವಂತನಾದರು, ಪ್ರಗುಣಿತ=ವಿಶೇಷವಾಗಿ ಆವೃತ್ತಿಯುಳ್ಳ, ನಯೋಪಿ=ನೀತಿಶಾಸ್ತ್ರವುಳ್ಳವನಾದರು, ಬಾಢಂ=ದೃಢವಾಗಿ, ಆತ್ಮಬೋಧೋಪಿ=ಉತ್ಪನ್ನವಾದ ಜ್ಞಾನವುಳ್ಳವನಾದರು, ಅಸ್ಮಿನ್=ಈ ನಡೆಯುತ್ತಿರುವ, ಸಂಸಾರೇ=ಸಂಸಾರದಲ್ಲಿ, ಸುಗತೀನಾಂ=ಸನ್ಮಾರ್ಗಗಳಿಗೆ, ಭಾಜನಂ=ಯೋಗ್ಯನು, ವಿರಳಃ=ವ್ಯಗ್ಯನಾಗಿರುವನು, ಯೇನ=ಯಾವಕಾರಣದಿಂದ, ಏತಸ್ಮಿನ್=ಈ ಸಂಸಾರದಲ್ಲಿ, ವಾಮಾಕ್ಷೀಣಾಂ=ವಾಮಲೋಚನೆಯರ, ಕುಟಿಲ=ವಕ್ರವಾಗಿರುವ, ಭ್ರೂಲತಾ=ಲತೆಯಂತಿರುವ ಕಣ್ಣ ಹುಬ್ಬು, ಕುಂಚಿಕೇವ=ಬೀಗದ ಕೈಯ್ಯಂತೆ, ನಿರಯನಗರ=ಯಮರಾಜಧಾನಿಯ, ದ್ವಾರಂ=ಬಾಗಿಲನ್ನು, ಉದ್ಘಾಟಯಂತೀ=ತೆಗೆಯುವಂಥಾದ್ದು, ಭವತಿ=ಆಗುತ್ತದೆ. ॥೨೩॥

ತಾ॥ ಲತೆಯಂತಿರುವ ಕಾಮಿನಿಯರ ಕಣ್ಣ ಹುಬ್ಬು ಯಮರಾಜಧಾನಿಯ ಬಾಗಿಲ ಬೀಗವನ್ನು ತೆಗೆಯುವ ಬೀಗದಕೈಯಂತಿದ್ದು, ಸಂಸಾರದಲ್ಲಿ ಸಿಲುಕಿದವರನ್ನು ಕರೆದೊಯ್ದು ನರಕವನ್ನು ಹೊಗಿಸಲು ಸಿದ್ಧವಾಗಿರುವಲ್ಲಿ, ಶಾಸ್ತ್ರಜ್ಞನಾದರೂ, ವಿನಯಸಂಪನ್ನನಾದರೂ, ಜ್ಞಾನಿಯಾದರೂ ನರಕದ್ವಾರವನ್ನು ಬಿಟ್ಟು ಬೇರೆ ಉತ್ತಮಗತಿಯನ್ನು ಹೊಂದತಕ್ಕವನು ಬಹುದುರ್ಲಭವು. ನಾರಿಯಧೀನನಿಗೆ ನರಕವು ಸಿದ್ಧವೆಂದರಿಯುವದು.

ಶ್ಲೋ॥ ಕೃಶಃ ಕಾಣಃ ಖಂಜಃ ಶ್ರವಣರಹಿತಃ ಪುಚ್ಛವಿಕಲೋ ವ್ರಣೀ ಪೂಯಕ್ಲಿನ್ನಃ ಕ್ರಿಮಿಕುಲಶತೈರಾವೃತತನುಃ ॥ ಕ್ಷುಧಾಕ್ಷಾಮೋ ಜೀರ್ಣಃ ಪಿಠರಕಕಪಾಲಾರ್ಪಿತಗಳಃ ಶುನೀಮನ್ವೇತಿ ಶ್ವಾ ಹತಮಪಿಚ ಹಂತ್ಯೇವ ಮದನಃ ॥ .... .... ॥೨೪॥

ಟೀ॥ ಎರಡು ಶ್ಲೋಕಗಳಿಂದ ಕಾಮನ ವಿಚಿತ್ರ ಚರಿತ್ರೆಯನ್ನು ಹೇಳುತ್ತಾನೆ — ಕೃಶಃ=ಬಡವಾದ, ಕಾಣಃ=ಒಂದು ಕಣ್ಣಿಲ್ಲದ. ಖಂಜಃ=ಕುಂಟಾದ, ಶ್ರವಣರಹಿತಃ=ಕಿವಿಯಿಲ್ಲದ, ಪುಚ್ಛವಿಕಲಃ=ಬಾಲವಿಲ್ಲದ, ವ್ರಣೀ=ಗಾಯವುಳ್ಳ, ಪೂಯಕ್ಲಿನ್ನಃ=ಕೀವಿನಿಂದ ನನೆದ, ಕ್ರಿಮಿ=ಹುಳಗಳ, ಕುಲಶತೈಃ=ಅನೇಕ ಪರಂಪರೆಗಳಿಂದ, ಆವೃತತನುಃ=ವ್ಯಾಪ್ತ ಶರೀರವುಳ್ಳ, ಕ್ಷುಧಾಕ್ಷಾಮಃ=ಹಸಿವೆಯಿಂದ ಜೀರ್ಣವಾದ, ಜೀರ್ಣಃ=ಶಿಥಿಲವಾದ, ಪಿಠರಕ=ಮಡಿಕೆಯ, ಕಪಾಲ=ಮುಖಭಾಗದಲ್ಲಿ, ಅರ್ಪಿತ=ಇಡಲ್ಪಟ್ಟ, ಗಳಃ=ಕಂಠವುಳ್ಳದ್ದಾದರೂ, ಶ್ವಾ=ನಾಯಿಯು, ಶುನೀಂ=

ಹೆಣ್ಣು ನಾಯಿಯನ್ನು, ಅನ್ವೇತಿ=ಅನುಸರಿಸುವದು, ಮದನಃ=ಮನ್ಮಥನು, ಹತೇಽಪಿ=ಪೆಟ್ಟು ತಿಂದವನನ್ನೇ, ಹಂತ್ಯೇವ=ಹಿಂಸಿಸುವನು, .... ॥೨೮॥

ತಾ॥ ಬಹು ಕೃಶವಾಗಿಯೂ, ಕುರುಡಾಗಿಯೂ, ಕುಂಟಾಗಿಯೂ, ಕಿವಿಯಿಲ್ಲದೆಯೂ, ಬಲಹೀನವಾಗಿಯೂ, ದೇಹದೊಳು ಹುಣ್ಣುಳ್ಳದ್ದಾಗಿಯೂ ಆದುದರಿಂದಲೇ ಹುಳಗಳಿಂದ ಆಕ್ರಮಿಸಲ್ಪಟ್ಟದ್ದಾಗಿ, ಕೀವಿನಿಂದೊಡಗೂಡಿ, ಹಸಿವೆಯಿಂದ ಬಳಲುತ್ತ ಕೇವಲ ಶಿಥಿಲವಾಗಿ ಮಡಿಕೆಯ ಕಂಠದೊಳಗೆ ತಗಲಿಕೊಂಡಿರುವ ಕೊರಳುಳ್ಳದ್ದಾಗಿರುವದರಿಂದಲೇ ಅಸಹ್ಯಕರವಾಗಿರುವ ನಾಯಿಯು ತನಗೆ ಇಷ್ಟು ಅವಸ್ಥೆ ಇದ್ದಾಗ್ಯೂ ಹೆಣ್ಣುನಾಯಿಯನ್ನು ಕಂಡರೆ ಬಿಡದೆಯೇ ಅದರ ಹಿಂದೆ ಅನುಸರಿಸುತ್ತಾ ಹೋಗುವದು. ಆಹಹ! ಕಾಮನು ಕೇವಲ ಕಷ್ಟಪಟ್ಟವನನ್ನೇ ಪುನಃ ಹಿಂಸಿಸಿ ಪ್ರಾಣ ತೆಗೆಯುವನು. ಈತನು ಅತಿನಿಂದ್ಯನೆಂದಾಶಯವು .... ॥೨೮॥

ಶ್ಲೋ॥ ಸ್ತ್ರೀಮುದ್ರಾಂ ಕುಸುಮಾಯುಧಸ್ಯ ಜಯಿನೀಂ ಸರ್ವಾರ್ಥಸಂಪ
ತ್ಕರೀಂ ಯೇ ಮೂಢಾಃ ಪ್ರವಿಹಾಯ ಯಾಂತಿ ಕುಧಿಯೋ ಮಿಥ್ಯಾಫ
ಲಾನ್ವೇಷಿಣಃ ॥ ತೇ ತೇನೈವ ನಿಹತ್ಯ ನಿರ್ದಯತರಂ ನಗ್ನೀಕೃತಾ
ಮುಂಡಿತಾಃ ಕೇಚಿತ್ಪಂಚಶಿಖೀಕೃತಾಶ್ಚ ಜಟಿಲಾಃ ಕಾಪಾಲಿಕಾ
ಶ್ಚಾಪರೇ ॥ .... .... .... ॥೨೯॥

ಟೀ॥ ಸರ್ವಾರ್ಥಸಂಪತ್ಕರೀಂ=ಸಕಲ ಪುರುಷಾರ್ಥ ಸಾಧಕಳಾದ, ಕುಸುಮಾಯುಧಸ್ಯ=ಕುಸುಮಬಾಣನನ್ನು, ಜಯಿನೀಂ=ಗೆಲ್ಲುವ, ಸ್ತ್ರೀಮುದ್ರಾಂ=ಅಂಗನೆಯೆಂಬಗುರುತನ್ನು (ಮೊಹರನ್ನು) ಕುಧಿಯಃ=ದುರ್ಬುದ್ಧಿಯುಳ್ಳ, ಯೇಮೂಢಾಃ=ಯಾವ ಅವಿವೇಕಿಗಳು, ಪ್ರವಿಹಾಯ=ಬಿಟ್ಟು, ಮಿಥ್ಯಾಫಲಾನ್ವೇಷಿಣಃ=ಅನೃತಫಲಾಭಿಲಾಷಿಗಳಾಗಿ, ಯಾಂತಿ=ಹೋಗುವರೋ, ತೇ=ಆ ಮೂಢರು, ತೇನೈವ=ಆ ಮನ್ಮಥನಿಂದಲೇ, ನಿರ್ದಯತರಂ=ದಯವಿಲ್ಲದಂತೆ, ನಿಹತ್ಯ=ಹೊಡೆದು, ಕೇಚಿತ್=ಕೆಲವರು, ನಗ್ನೀಕೃತಾಃ=ದಿಗಂಬರರಾಗಿ ಮಾಡಲ್ಪಟ್ಟವರು, ಕೇಚಿತ್=ಮತ್ತೆ ಕೆಲವರು, ಮುಂಡಿತಾಃ=ಸನ್ಯಾಸಿಗಳಾಗಿ (ಪರಮಹಂಸರಾಗಿ) ಮಾಡಲ್ಪಟ್ಟವರು, ಕೇಚಿತ್=ಇನ್ನು ಕೆಲವರು, ಪಂಚಶಿಖೀಕೃತಾಃ=ಪಂಚಶಿಖವುಳ್ಳವರಾಗಿ ಮಾಡಲ್ಪಟ್ಟವರು, ಕೇಚಿತ್=ಬೇರೆ ಕೆಲವರು, ಜಟಿಲಾಃ=ಜಟಾಧಾರಿಗಳಾಗಿ, ಕೃತಾಃ=ಮಾಡಲ್ಪಟ್ಟವರು, ಅಪರೇ=ಇತರರು, ಕಾಪಾಲಿಕಾಶ್ಚ=ಕಪಾಲಪಾಣಿಗಳಾಗಿಯೂ, ಕೃತಾಃ=ಮಾಡಲ್ಪಟ್ಟವರು. .... .... ॥೨೯॥

ತಾ॥ ಲೋಕದೊಳು ಸಕಲ ಪುರುಷಾರ್ಥಗಳ ಸಂಪತ್ತಿಗೆ ಮುಖ್ಯ

ಕಾರಣವಾಗಿ ಲೋಕೋತ್ತರನಾದ ಕಾಮನನ್ನು ಗೆಲ್ಲತಕ್ಕ ಶಕ್ತಿಯುಳ್ಳ ಕಾಮಿನಿಯರನ್ನು ಬರುವೇಳೆ ಯಾರಾದರೂ ಅಪೂರ್ವವಾಗಿ ಅವಿವೇಕದಿಂದ ತ್ಯಜಿಸಿ ಹೋಗುವರೋ, ಅಂಥವರನ್ನು ಕಾಮನು ತನ್ನ ಆಜ್ಞೋಲ್ಲಂಘನೆಯನ್ನು ಮಾಡಿದರೆಂಬ ಕೋಪದಿಂದ ದಂಡಿಸಿ ಕೆಲವರನ್ನು ಪರಮಹಂಸರನ್ನಾಗಿಯೂ, ಕೆಲವರನ್ನು ಪಂಚಶಿಖವುಳ್ಳವರನ್ನಾಗಿಯೂ, ಮತ್ತೆ ಕೆಲಬರನ್ನು ಜಟಾಧಾರಿಗಳನ್ನಾಗಿಯೂ, ಇನ್ನು ಕೆಲವರನ್ನು ದಿಗಂಬರರನ್ನಾಗಿಯೂ, ಇತರ ಕೆಲವರನ್ನು ಕಾಪಾಲಿಕರನ್ನಾಗಿಯೂ ಮಾಡಿ ಓಡಿಸಿದನು. ಉತ್ಪ್ರೇಕ್ಷಾಲಂಕಾರವು. .... ॥೭೯॥

ಶ್ಲೋ॥ ವಿಶ್ವಾಮಿತ್ರಪರಾಶರಪ್ರಭೃತಯೋವಾತಾಂಬುಪರ್ಣಾಶನಾಸ್ತೇ
ಪಿಸ್ತ್ರೀಮುಖಪಂಕಜಂಸುಲಲಿತಂದೃಷ್ಟ್ವೈವಮೋಹಂಗತಾಃ ॥
ಶಾಲ್ಯನ್ನಂಸಘೃತಂಪಯೋದಧಿಯುತಂಯೇಭುಂಜತೇಮಾನವಾಸ್ತೇ
ಷಾಮಿಂದ್ರಿಯನಿಗ್ರಹೋಯದಿಭವೇದ್ವಿಂಧ್ಯಃಪ್ಲವೇತ್ಸಾಗರೇ ॥

ಟೀ॥ ಮಹರ್ಷಿಗಳೂ ಇಂದ್ರಿಯ ನಿಗ್ರಹವನ್ನು ಮಾಡಲಾರದೆ ಹೋದರೆಂದು ಹೇಳುತ್ತಾನೆ—ವಾತಾಂಬುಪರ್ಣಾಶನಾಃ=ಗಾಳಿ, ನೀರು. ಎಲೆಗಳೇ ಆಹಾರವುಳ್ಳ, ವಿಶ್ವಾಮಿತ್ರಪರಾಶರಪ್ರಭೃತಯಃ=ವಿಶ್ವಾಮಿತ್ರ ಪರಾಶರರೇ ಮೊದಲಾದ ಮಹರ್ಷಿಗಳು, ಯೇ=ಯಾರೋ, ತೇಪಿ=ಅಂಥವರೂ, ಸುಲಲಿತಂ=ಅತ್ಯಂತ ಸುಂದರವಾದ, ಸ್ತ್ರೀಮುಖಪಂಕಜಂ=ಕಾಮಿನಿಯರ ಕಮಲದಂತಿರುವ ಮುಖವನ್ನು, ದೃಷ್ಟ್ವೈವ=ನೋಡಿಯೆ, ಮೋಹಂ=ಭ್ರಾಂತಿಯನ್ನು, ಗತಾಃ=ಹೊಂದಿದರು, ಯೇ ಮಾನವಾಃ=ಯಾವ ಮನುಷ್ಯರಾದರೆ, ಸಘೃತಂ=ತುಪ್ಪದಿಂದಕೂಡಿದ, ಪಯೋದಧಿಯುತಂ=ಹಾಲು ಮೊಸರುಗಳಿಂದ ಕೂಡಿದ, ಶಾಲ್ಯನ್ನಂ=(ಭತ್ತದ ಸಣ್ಣಕ್ಕಿಯ) ಅನ್ನವನ್ನು, ಭುಂಜತೇ=ಭೋಜನ ಮಾಡುವರೋ, ತೇಷಾಂ=ಅಂಥವರಿಗೂ, ಇಂದ್ರಿಯನಿಗ್ರಹಃ=ಇಂದ್ರಿಯ ನಿಯಮವು, ಭವೇದ್ಯದಿ=ಉಂಟಾದರೆ, ತದಾ=ಆಗ, ವಿಂಧ್ಯಃ=ವಿಂಧ್ಯಪರ್ವತವು, ಸಾಗರೇ=ಸಮುದ್ರದಲ್ಲಿ, ಪ್ಲವೇತ್=ತೇಲುವದು.

ತಾ॥ ಗಾಳಿ, ನೀರು, ತರಗೆಲೆ, ಇವುಗಳನ್ನು ಮಾತ್ರವೇ ಆಹಾರ ಮಾಡಿಕೊಂಡಿದ್ದ ವಿಶ್ವಾಮಿತ್ರ, ಪರಾಶರ, ಶಾಂಡಿಲ್ಯ ಮೊದಲಾದ ಮಹರ್ಷಿಗಳು ಕೂಡ, ಅಪೂರ್ವ ಮನೋಹರವಾದ ಕೃಶಾಂಗಿಯರ ಮುಖವನ್ನು ನೋಡಿದ ಮಾತ್ರದಿಂದಲೇ ಕಾಮಿನೀ ಪರತಂತ್ರರಾಗಿ ಹೋದರು. ಹೀಗಿರುವಲ್ಲಿ ವೀರ್ಯವೃದ್ಧಿಕರವಾಗಿರುವ ಹಾಲು ತುಪ್ಪ ಮೊಸರು ಮೊದಲಾದ ಪದಾರ್ಥಗಳಿಂದೊಡಗೂಡಿದ ಮೃಷ್ಟಾನ್ನವನ್ನು ಭೋಜನ ಮಾಡುವ

ಸಾಮಾನ್ಯ ಮನುಷ್ಯರಿಗೂ ಇಂದ್ರಿಯನಿಗ್ರಹ ಸಾಮರ್ಥ್ಯ ವುಂಟಾಗುವ ಪಕ್ಷದಲ್ಲಿ, ವಿಂಧ್ಯಪರ್ವತವು ಸಮುದ್ರದಲ್ಲಿ ತೇಲಲು ಏನೂ ಸಂಶಯವಿಲ್ಲ. ಎಂದರೆ ಇಂದ್ರಿಯನಿಗ್ರಹ ಮಾಡುವಿಕೆಯು ಬಹು ಅಸಾಧ್ಯವೆಂದಾಶಯವು. .... .... .... ||೮೦||



## ಋತುವರ್ಣನಾರಂಭವು.

ಶ್ಲೋ|| ಪರಿಮಳಭೃತೋವಾತಾಶ್ಶಾಖಾನವಾಂಕುರಕೋಟಯೋ ಮಧುರ
ವಿಧುರೋತ್ಕಂಠಾಭಾಜಃಪ್ರಿಯಾಃಪಿಕಪಕ್ಷಿಣಾಂ || ವಿರಳವಿರಳ
ಸ್ವೇದೋದ್ಗಾರಾವಧೂವದನೇಂದವಃ ಪ್ರಸರತಿಮಧೌಧಾತ್ರ್ಯಾಂ
ಜಾತೋನಕಸ್ಯಗುಣೋದಯಃ || .... ||೮೧||

ಟೀ|| ಶೃಂಗಾರೋಪಯೋಗಿಯಾದ ಋತುವರ್ಣನವನ್ನಾರಂಭಿಸುತ್ತಾನೆ— ವಾತಾಃ=ಮಾರುತಗಳು, ಪರಿಮಳ=ಸುಗಂಧವನ್ನು ಭೃತಃ=ಧರಿಸುವವು, ಶಾಖಾಃ=ಮರದ ಕೊನೆಗಳು, ನವ=ಹೊಸದಾದ, ಅಂಕುರ=ಚಿಗುರುಗಳ, ಕೋಟಯಃ=ಕೊನೆಗಳುಳ್ಳವು. ಪಿಕಪಕ್ಷಿಣಾಂ=ಕೋಗಿಲೆಗಳ, ಪ್ರಿಯಾಃ=ಅಂಗನೆಯರು, ಮಧುರ=ಹಿತವಾದ, ವಿಧುರ=ಕಷ್ಟವಾದ, ಉತ್ಕಂಠಾ=ಕೂಗುವದರಲ್ಲಿ ಔತ್ಸುಕ್ಯವನ್ನು, ಭಾಜಃ=ಹೊಂದಿರುವವು, ವಧೂವದನೇಂದವಃ=ಕಾಮಿನಿಯರ ಚಂದ್ರನಂತಿರುವ ಮುಖಗಳು, ವಿರಳವಿರಳ=ಸ್ವಲ್ಪವಾದ, ಸ್ವೇದ=ಬೆವರಿನ, ಉದ್ಗಾರಾಃ=ಉದಯವುಳ್ಳವುಗಳು, ಧಾತ್ರ್ಯಾಂ=ಭೂಮಿಯಲ್ಲಿ, ಮಧೌ=ವಸಂತ ಋತುವು, ಪ್ರಸರತಿಸತಿ=ವ್ಯಾಪಿಸುತ್ತಿರಲಾಗಿ, ಕಸ್ಯ=ಯಾವ ವಸ್ತುವಿಗೆ, ಗುಣೋದಯಃ=ಗುಣೋತ್ಕರ್ಷವು, ನಜಾತಃ=ಉಂಟಾಗಲಿಲ್ಲವು. .... ||೮೧||

ತಾ|| ಶೈತ್ಯ ಸೌರಭ್ಯ ಮಾಂದ್ಯ ಗುಣವುಳ್ಳದ್ದಾಗಿ ಮಾರುತವು ಬೀಸುತಲಿರುವದು. ರಸಾಲಾದಿ ತರುಗಳೆಲ್ಲವೂ ಚಿಗುರುಗಳಿಂದ ಶೋಭಿಸುತ್ತಲಿರುವವು. ಕೋಗಿಲೆಗಳು ಕಿವಿಗಿಂಪಾಗಿ ಕೂಗುತ್ತಲಿರುವವು. ಉಷ್ಣಕಾಲದಾರಂಭವಾದ ಕಾರಣ ಚಂದ್ರನಂತೆಸೆವ ಕಾಮಿನಿಯರ ಮುಖಗಳು ಬೆವರುತುಂತುರುಗಳಿಂದ ಹೊಳೆಯುವವು. ಆದುದರಿಂದಲೇ ವಸಂತ ಋತುವು ಪ್ರಾದುರ್ಭವಿಸಲು ಎಲ್ಲಾ ವಸ್ತುಗಳೂ ಅತಿಶಯದಿಂದ ಪ್ರಕಾಶಿಸುವದೆಂದಾಶಯವು. .... .... ||೮೧||

ತಾ॥ ಪಕ್ಕದಲ್ಲಿ ಮಂದಹಾಸದಿಂದೊಡಗೂಡಿ ವಿಚಿತ್ರ ವಿಭ್ರಮಗಳಿಂದೆಸೆವ ಕಾಮಿನಿಯರು, ಕೋಕಿಲಾಂಗನೆಯರ ಕಮನೀಯವಾದ ಕಲರವವು, ವಿಕಸಿತ ಕುಸುಮಗಳಿಂದೆಸೆವ ಲತಾಗೃಹವು, ಸರಸವಾದ ಕವಿಗಳೊಡನೆ ಸರಸಸಲ್ಲಾಪವು, ಮನೋಹರವಾದ ಪೂರ್ಣ ಚಂದ್ರಕಿರಣಗಳು, ವಿಚಿತ್ರವಾದ ಪುಷ್ಪಹಾರಗಳು ಎಂಬೀಸಂಪತ್ತುಗಳನ್ನೀಚೈತ್ರಮಾಸದೊಳು ಕೆಲವರು ಅನುಭವಿಸುವರಲ್ಲದೆ ವಿರಹಿಗಳಿಗೆ ದುರ್ಲಭವು. ॥೮೩॥

ಶ್ಲೋ॥ ಪಾಂಥಸ್ತ್ರೀವಿರಹಾನಲಾಹುತಿಕಲಾಮಾತನ್ವತೀಮಂಜರೀ ಮಾಕಂ
ದೇಷುಪಿಕಾಂಗನಾಭಿರಧುನಾಸೋತ್ಕಂಠಮಾಲೋಕ್ಯತೇ। ಅಲ್ಪಾ
ಸ್ತೇನವಪಾಟಲಾಪರಿಮಳಪ್ರಾಗ್ಭಾರಪಾಟಚ್ಚರಾವಾಂತಿಕ್ಲಾಂತಿ
ವಿತಾನತಾನವಕೃತಶ್ಶ್ರೀಖಂಡಶೈಲಾನಿಲಾಃ ॥೮೪॥

ಟೀ॥ ಅಧುನಾ=ಈಗ, ಪಾಂಥಸ್ತ್ರೀ=ವಿರಹಸ್ತ್ರೀಯರ, ವಿರಹಾನಲ=ವಿರಹಾಗ್ನಿಯ, (ವಿಯೋಗಾಗ್ನಿ) ಆಹುತಿಕಲಾಂ=ಆಹುತಿ ಸಾಮ್ಯವನ್ನು, ಆತನ್ವತೀ=ಮಾಡುತಲಿರುವ, ಮಾಕಂದೇಷು=ಸಿಹಿಮಾವಿನ ಗಿಡದಲ್ಲಿರುವ, ಮಂಜರೀ=ಹೂವಿನ ಗೊಂಚಲು, ಪಿಕಾಂಗನಾಭಿಃ=ಹೆಣ್ಣು ಕೋಗಿಲೆಗಳಿಂದ, ಸೋತ್ಕಂಠ=ಆನಂದದೊಡನೆ, ಆಲೋಕ್ಯತೆ=ನೋಡಲ್ಪಡುತ್ತದೆ, ನವಪಾಟಲಾ=ಹೊಸದಾದ ಪಾಟಲೀ ಕುಸುಮಗಳ, ಪರಿಮಳಪ್ರಾಗ್ಭಾರ=ಪರಿಮಳ ಸಂಪತ್ತಿಯನ್ನು, ಪಾಟಚ್ಚರಾಃ=ಅಪಹರಿಸುವ, ಕ್ಲಾಂತಿ=ಬಳಲಿಕೆಗಳ, ವಿತಾನ=ಸಮುದಾಯವನ್ನು, ತಾನವ=ಕೃಶವಾದದ್ದನ್ನಾಗಿ, ಕೃತಃ=ಮಾಡುವ, ಅಲ್ಪಾಃ=ಸೂಕ್ಷ್ಮವಾಗಿರುವ, ಶ್ರೀಖಂಡ ಶೈಲ=ಮಲಯಪರ್ವತದ, ಅನಿಲಾಃ=ಮಾರುತಗಳು, ವಾಂತಿ=ಬೀಸುತಲಿರುವವು.

ತಾ॥ ದೇಶಾಂತರವನ್ನು ಕುರಿತು ಪ್ರಯಾಣ ಮಾಡಿರುವ ಪತಿಯುಳ್ಳ ಸತಿಯರ ವಿರಹಾಗ್ನಿಗೆ ಆಹುತಿಯ ಸೊಬಗನ್ನು ಸೂಚಿಸುತ್ತಿರುವ ಸಿಹಿಮಾವುಗಳಲ್ಲಿರುವ ಹೂವಿನಗೊಂಚಲುಗಳನ್ನು ಹೆಣ್ಣು ಕೋಗಿಲೆಗಳು ಬಹುಪ್ರೀತಿಯಿಂದ ನೋಡುತಲಿರುವವು, ಮತ್ತು ಪಾಟಲೀಪುಷ್ಪಗಳಲ್ಲಿರುವ ವಾಸನೆಯನ್ನು ತೆಗೆದುಕೊಂಡು ಶ್ರಮವನ್ನು ಪರಿಹರಿಸತಕ್ಕವುಗಳಾಗಿರುವ ಮಲಯ ಪರ್ವತದ ಮಂದಮಾರುತಗಳು ಬೀಸುತಲಿರುವವು. ಎಂದರೆ ವಸಂತ ಸಮಯವೊಳಷ್ಟು ಸಂಪತ್ತಿರುವದು. ವಿರಹಿಗಳಿಗತ್ಯಂತ ಕಷ್ಟವೆಂದರಿಯುವದು. .... ॥೮೪॥

ಶ್ಲೋ॥ ಪ್ರಥಿತಃಪ್ರಣಯವತೀನಾಂತಾವತ್ಪದಮಾತನೋತುಹೃದಿಮಾನಃ
ಭವತಿನಯಾವಚ್ಚಂದನತರುಸುರಭಿರ್ಮಲಯಪವಮಾನಃ ॥೮೫॥

ಟೀ॥ ಪ್ರಥಿತಃ=ದೃಢವಾದ, ಮಾನಃ=ಅಸೂಯೆಯಿಂದುಂಟಾದ ಕೋಪವು, ಪ್ರಣಯವತೀನಾಂ=ಪ್ರಿಯತಮೆಯರ, ಹೃದಿ=ಮನಸ್ಸಿನಲ್ಲಿ, ತಾವತ್=ಆ ವರೆಗೂ, ಪದಂ=ಸ್ಥಾನವನ್ನು, ಆತನೋತು=ಮಾಡಲಿ, ಚಂದನತರು=ಶ್ರೀಗಂಧ ವೃಕ್ಷಗಳಿಂದ, ಸುರಭಿಃ=ಸುವಾಸನೆಯುಳ್ಳ, ಮಲಯಪವಮಾನಃ=ಮಲಯಮಾರುತವು, ಯಾವತ್=ಎಷ್ಟುಪರ್ಯಂತಕ್ಕೂ, ನಭವತಿ=ಆವಿರ್ಭವಿಸುವದಿಲ್ಲವೋ ॥೮೫॥

ತಾ॥ ವಸಂತ ಸಮಯವು ಪ್ರಾದುರ್ಭವಿಸಿ ಶ್ರೀಗಂಧದ ವಾಸನೆಯಿಂದೊಡಗೂಡಿದ ಮಲಯಪರ್ವತದ ಮಂದಮಾರುತವು ಬೀಸುವಪರ್ಯಂತವೂ ಕಾಮಿನಿಯರಿಗೆ ಪರಾಂಗನಾಸಕ್ತರಾದ ತಮ್ಮ ಪ್ರಿಯರ ವಿಷಯದಲ್ಲಿ ಉಂಟಾಗಿದ್ದ ಕೋಪವು ನೆಲೆಗೊಂಡಿರುವುದು. ಆ ಮಾರುತಸ್ಪರ್ಶವಾದ ಒಡನೆಯೇ, ಮಾನಿನಿಯರು ಮಾನವನ್ನು ತೊರೆದು ಪ್ರಿಯತಮರ ಪರತಂತ್ರರಾಗುವರು. ಮಂದಮಾರುತವು ಮದನೋದ್ರೇಕವನ್ನುಂಟುಮಾಡುವುದು. .... .... .... ॥೮೫॥

ಶ್ಲೋ॥ ಸಹಕಾರಕುಸುಮಕೇಸರನಿಕರಭರಾಮೋದಮೂರ್ಛಿತದಿಗಂತೇ ।
ಮಧುರಮಧುವಿಧುರಮಧುಪೇ ಮಧೌಭವೇತ್ಕಸ್ಯನೋತ್ಕಂಠಾ ॥

ಟೀ॥ ಸಹಕಾರ=ಸಿಹಿಮಾವಿನಗಿಡಗಳ, ಕುಸುಮ=ಪುಷ್ಪಗಳ, ಕೇಸರ=ಕಿಂಜಲ್ಕಗಳ, ನಿಕರ=ಸಮುದಾಯದ, ಭರ=ಸಮೃದ್ಧಿಯ, ಆಮೋದ=ಪರಿಮಳದಿಂದ, ಮೂರ್ಛಿತ=ವ್ಯಾಪ್ತವಾದ, ದಿಗಂತೇ=ದಿಕ್ಕುಗಳಕೊನೆಗಳುಳ್ಳ ಮಧುರ=ಮಾಧುರ್ಯಗುಣದಿಂದ ಕೂಡಿದ, ಮಧು=ಮಕರಂದದಿಂದ, ವಿಧುರ=ವಿಹ್ವಲಗಳಾದ, (ಮದಿಸಿದ) ಮಧುಪೇ=ಭ್ರಮರಗಳುಳ್ಳ, ಮಧೌ=ವಸಂತಸಮಯದಲ್ಲಿ, ಕಸ್ಯ=ಯಾವನಿಗೆ, ಉತ್ಕಂಠಾ=ಸಂಭೋಗೌತ್ಸುಕ್ಯವು, ನಭವೇತ್=ಉಂಟಾಗದೆ ಹೋಗುವದು. ॥೮೬॥

ತಾ॥ ವಸಂತ ಸಮಯದೊಳು ಕುಸುಮಿಸಿರುವ ಸೀಮಾವಿನ ಗಿಡಗಳ ಕುಸುಮಕೇಸರಗಳ ಸುವಾಸನೆಯು ದಿಗಂತಕ್ಕೆ ವ್ಯಾಪಿಸಿ ಮಧುರವಾದ ಮಕರಂದ ಪಾನವಮಾಡಿ ಮದಿಸಿ ದುಂಬೆಗಳು ಕಿವಿಗಿಂಪಾಗಿ ಝೇಂಕರಿಸುತ್ತಿರಲು, ಇಂತಪ್ಪ ಕಾಲದೊಳು ಮತ್ತೆ ಯಾವ ಪುರುಷನಿಗೆ ಅಥವಾ ಕಾಮಿನಿಗೆ ಆಗಲಿ, ಸಂಭೋಗೌತ್ಸುಕ್ಯವುಂಟಾಗುವದಿಲ್ಲವೋ ಅಂತವರನ್ನು ನಾನು ಕಾಣೆನು. ಎಂದರೆ ವಸಂತಕಾಲವು ಕಾಮವಿಕಾರಕ್ಕೆ ತಾರು ಮನೆಯಾಗಿರುವುದು .... .... ॥೮೬॥

ಶ್ಲೋ॥ ಅಚ್ಛಾಚ್ಛಚಂದನರಸಾರ್ದ್ರತರಾಮೃಗಾಕ್ಷ್ಯೋಧಾರಾಗೃಹಾಣಿಕು....

ಸುಮಾನಿಚಕೌಮುದೀಚ ॥ ಮಂದೋಮರುತ್ಸುಮನಸಶ್ಶುಚಿ
ಹರ್ಮ್ಯಪೃಷ್ಠಂಗ್ರೀಷ್ಮೇಮದಂಚಮದನಂಚವಿವರ್ಧಯಂತಿ॥೮೩॥

ಟೀ॥ ಇನ್ನು ಮೂರು ಶ್ಲೋಕಗಳಿಂದ ಗ್ರೀಷ್ಮರ್ತುವನ್ನು ವರ್ಣಿಸುತ್ತಾನೆ. ಅಚ್ಛಾಚ್ಛ=ಅತಿ ಸ್ವಚ್ಛವಾದ, ಚಂದನರಸ=ಪರಿಮಳದ್ರವದಿಂದ, ಆರ್ದ್ರತರ=ಸಿಕ್ತರಾದ (ತೊಡೆಯಲ್ಪಟ್ಟ) ಮೃಗಾಕ್ಷ್ಯಃ=ತರುಣಿಯರು, ಧಾರಾಗೃಹಾಣಿ=ಜಲಯಂತ್ರಗೃಹಗಳು ಕುಸುಮಾನಿಚ=ಮಲ್ಲಿಕಾದಿ ಪುಷ್ಪಗಳು, ಕೌಮುದೀಚ=ಚಂದ್ರಿಕೆಯು, ಮಂದಃಮರುತ್=ಮಂದಮಾರುತವು, ಸುಮನಸಃ=ಜಾಜಿಪುಷ್ಪಗಳು, ಶುಚಿ=ಶುದ್ಧವಾದ, ಹರ್ಮ್ಯಪೃಷ್ಠಂ=ಮೇಲುಪ್ಪರಿಗೆಯು ಇವುಗಳು, ಗ್ರೀಷ್ಮೇ=ಗ್ರೀಷ್ಮರ್ತುವಿನಲ್ಲಿ, ಮದಂಚ=ಹರ್ಷಾತಿಶಯವನ್ನು, ಮದನಂಚ=ಕಾಮವಿಕಾರವನ್ನು, ವಿವರ್ಧಯಂತಿ=ವೃದ್ಧಿಯನ್ನೈದಿಸುವವು. ॥೮೩॥

ತಾ॥ ಘಮಘಮಿಸುವ ವಾಸನೆಯುಳ್ಳ ಪರಿಮಳದ ಲೇಪನದಿಂದ ಶೋಭಿಪ ಹರಿಣನಯನೆಯರಾದ ತರುಣಿಯರು. ಜಲಯಂತ್ರಗಳಿಂದಾನಂದಕರವಾದ ಅಂತರ್ಗೃಹಗಳು, ಮಲ್ಲಿಗೆ, ಜಾಜಿ ಮೊದಲಾದ ದಿವ್ಯಕುಸುಮಗಳು, ಶ್ಲಾಘ್ಯವಾದ ಬೆಳ್ದಿಂಗಳು, ಸುಧಾಲೇಪನದಿಂದ ಶುದ್ಧವಾದ ಮೇಲುಪ್ಪರಿಗೆಯು ಮತ್ತು ಶೈತ್ಯಸೌರಭ್ಯಗಳಿಂದೊಡಗೂಡಿದ ಮಂದಮಾರುತವು ಇವುಗಳು ಗ್ರೀಷ್ಮರ್ತುವಿನ ಸಮಯದೊಳು ಹೇಳಲಶಕ್ಯವಾದ ಕಾಮವಿಕಾರವನ್ನೂ ಅಪಾರವಾದ ಆನಂದವನ್ನೂ ಉಂಟುಮಾಡುವುವು,

ಶ್ಲೋ॥ ಸ್ರಜೋಹೃದ್ಯಾಮೋದಾವ್ಯಜನಪವನಶ್ಚಂದ್ರಕಿರಣಾಃಪರಾಗಃ
ಕಾಸಾರೋಮಲಯಜರಜಶ್ಶೀಧುವಿಶದಂ । ಶುಚಿಸ್ಸೌಧೋತ್ಸಂ
ಗಃಪ್ರತನುವಸನಂಪಂಕಜದೃಶೋನಿದಾಘರ್ತಾವೇತದ್ವಿಲಸತಿಲಭಂ
ತೇಸುಕೃತಿನಃ ॥ .... .... ॥೮೪॥

ಟೀ॥ ಹೃದ್ಯಾಮೋದಾಃ=ಮನೋಹರವಾದ ವಾಸನೆಯುಳ್ಳ. ಸ್ರಜಃ=ಪುಷ್ಪಹಾರಗಳು, ವ್ಯಜನಪವನಃ=ಬೀಸಣಿಗೆಯ ಗಾಳಿಯು, ಚಂದ್ರಕಿರಣಾಃ=ಬೆಳ್ದಿಂಗಳು ಪರಾಗಃ=ಪುಷ್ಪಧೂಳಿಯು, ಕಾಸಾರಃ=ಕೊಳವು, ಮಲಯಜರಜಃ=ಪರಿಮಳದ ಪುಡಿಯು, ವಿಶದಂ=ನಿರ್ಮಲವಾದ, ಶೀಧು=ಮಕರಂದವು. ಶುಚಿಃ=ಶುದ್ಧವಾದ, ಸೌಧೋತ್ಸಂಗಃ=ಪ್ರಾಸಾದಪ್ರದೇಶವು, ಪ್ರತನುವಸನಂ=ಸೂಕ್ಷ್ಮವಸ್ತ್ರವು, ಪಂಕಜದೃಶಃ=ಸಾರಸಾಕ್ಷಿಯರು, ಏತತ್=ಈ ಸಮಸ್ತವನ್ನು. ನಿದಾಘರ್ತೌ=ಗ್ರೀಷ್ಮಕಾಲವು, ವಿಲಸತಿಸತಿ=ಪ್ರಕಾಶಿಸುತ್ತಿರಲಾಗಿ, ಸುಕೃತಿನಃ=ಪುಣ್ಯವಂತರು, ಲಭಂತೇ=ಹೊಂದುವರು. ॥೮೪॥

ತಾ॥ ಮನೋಹರವಾದ ಪುಷ್ಪಹಾರಗಳು, ಬೀಸಣಿಗೆಯ ಗಾಳಿಯೂ ಪುಷ್ಪಪರಾಗವು, ದಿವ್ಯವಾದ ಕೊಳವು, ಪರಿಮಳ ದ್ರವ್ಯವು, ಆನಂದಕರವಾದ ಮಧುವು, ಶುಭ್ರವಾಗಿರುವ ಉಪ್ಪರಿಗೆಯು, ಸೂಕ್ಷ್ಮಾಂಬರವು, ಸರಸೀರುಹಲೋಚನೆಯರಾದ ಕಾಮಿನಿಯರು, ಎಂಬೀ ಪರಮಾನಂದಕರವಾದ ಸೌಭಾಗ್ಯಾತಿಶಯವನ್ನು ಗ್ರೀಷ್ಮಕಾಲದೊಳು ಸುಕೃತಿಗಳಾದವರು ಪಡೆದು ಉಪಭೋಗಿಸುವರಲ್ಲದೆ ಸಾಮಾನ್ಯರಿಗೆ ಸರ್ವಥಾ ದೊರಿಯಲಾರದು. ಎಂದರೆ ಈಸಾಮಗ್ರಿಗಳು ಗ್ರೀಷ್ಮರ್ತುವಿನಲ್ಲಿ ಅತ್ಯಾನಂದವನ್ನುಂಟುಮಾಡತಕ್ಕವುಗಳೆಂದರಿವುದು. .... .... ॥೮೮॥

ಶ್ಲೋ॥ ಸುಧಾಶುಭ್ರಂಧಾಮ ಸ್ಫುರದಮಲರಶ್ಮಿಶ್ಶಶಧರಃಪ್ರಿಯಾವಕ್ತ್ರಾಂ
ಭೋಜಂಮಲಯಜರಜಶ್ಚಾತಿಸುರಭಿ । ಸ್ರಜೋಹೃದ್ಯಾಮೋ
ದಾಸ್ತದಿದಮಖಿಲಂರಾಗಿಣಿಜನೇಕರೋತ್ಯಂತಃ ಕ್ಷೋಭಂನತುವಿ
ಷಯಸಂಸರ್ಗವಿಮುಖೇ .... ॥೮೯॥

ಟೀ॥ ಸುಧಾಶುಭ್ರಂ=ಸುಣ್ಣದಿಂದ ಬೆಳ್ಳಗಿರುವ (ಅಮೃತದಂತೆ ಶುದ್ಧವಾದ) ಧಾಮ=ಮನೆಯು, ಸ್ಫುರದಮಲರಶ್ಮಿಃ=ಹೊಳೆವನಿರ್ಮಲಕಾಂತಿಯುಳ್ಳ, ಶಶಧರಃ=ಚಂದ್ರನು, ಪ್ರಿಯಾವಕ್ತ್ರಾಂಭೋಜಂ=ಕಾಮಿನಿಯ ಕಮಲದಂತಿರುವ ಮುಖವು ಅತಿಸುರಭಿ=ಅತ್ಯಂತ ಸುವಾಸನೆಯುಳ್ಳ, ಮಲಯಜರಜಃ=ಶ್ರೀಗಂಧ ಚೂರ್ಣವು, ಹೃದ್ಯಾಮೋದಾಃ=ಮನೋಹರವಾದ ವಾಸನೆಯುಳ್ಳ, ಸ್ರಜಃ=ಪುಷ್ಪಹಾರಗಳು, ಅಖಿಲಂ=ಸಮಸ್ತವಾದ, ತದಿದಂ=ಆ ಈ ಸುವಸ್ತು ಸಮುದಾಯವು, ರಾಗಿಣಿ=ವಿಷಯಾಸಕ್ತರಾದ, ಜನೇ=ಜನರಲ್ಲಿ. ಅಂತಃಕ್ಷೋಭಂ=ಕಾಮೋದ್ರೇಕವನ್ನು ಕರೋತಿ=ಉಂಟುಮಾಡುವದು, ವಿಷಯಸಂಸರ್ಗವಿಮುಖೇತು=ವಿಷಯಾಭಿಲಾಷೆಯಿಲ್ಲದ ಯೋಗಿಜನರಲ್ಲಿಯಾದರೊ, ನಕರೋತಿ=ಉಂಟುಮಾಡುವದಿಲ್ಲವು, ॥೮೯॥

ತಾ॥ ಅಮೃತದಂತೆ ಶುಭ್ರವಾದ ಅಥವಾ ಸುಧಾಲೇಪನದಿಂದ ಶುಚಿಯಾದ ಮಂದಿರ, ನಿರ್ಮಲವಾದ ಚಂದ್ರ ಕಿರಣಗಳು, ಮನೋಹರವಾದ ಭಾಮಿನಿಯ ಮುಖಕಮಲ, ಅತಿ ಸುವಾಸನೆಯುಳ್ಳ ಪರಿಮಳ, ಮಲ್ಲಿಗೆ ಜಾಜಿ ಮೊದಲಾದ ಕುಸುಮಗಳಿಂದ ವಿರಚಿತವಾದ ಹಾರಗಳು ಎಂಬೀ ಲೌಕಿಕ ಸಂಪತ್ತು, ವಿಷಯಾಭಿಲಾಷಿಗಳಾದ ಜನರಿಗೆ ಕಾಮವಿಕಾರೋದ್ರೇಕವನ್ನುಂಟುಮಾಡುವದಲ್ಲದೆ ಪರಮಾನಂದಾನುಭವಾಭಿಲಾಷಿಗಳಾದ ಯೋಗಿಗಳಿಗೆ ರುಚಿಸದಂದಾಗುವವು .... ॥೮೯॥

ಶ್ಲೋ॥ ತರುಣೀವೇಷೋದ್ದೀಪಿತಕಾಮಾವಿಕಸಜ್ಜಾತೀಪುಷ್ಪಸುಗಂಧಿಃ॥
ಉನ್ನತಪೀನಪಯೋಧರಭಾರಾಪ್ರಾವೃಟ್ತನುತೇಕಸ್ಯನಹರ್ಷಂ ॥

ಟೀ॥ ಇನ್ನು ವರ್ಷರ್ತುವನ್ನು ವರ್ಣಿಸುತ್ತಾನೆ—ಉದ್ದೀಪಿತ=ಉಂಟು ಮಾಡಲ್ಪಟ್ಟ, ಕಾಮಾ=ಸಂಭೋಗಾಭಿಲಾಷೆಯುಳ್ಳ, ವಿಕಸತ್=ಅರಳಿದ, ಜಾತೀ ಪುಷ್ಪ=ಜಾಜಿಹೂವುಗಳ, ಸುಗಂಧಿಃ=ಪರಿಮಳಗಂಧವುಳ್ಳ, ಉನ್ನತ=ಉತ್ತುಂಗವಾದ, ಪೀನ=ಬಲಿತ, ಪಯೋಧರ=ಉರೋಜಗಳ, ಮೇಘಗಳ, ಭಾರಾ=ಸಮುದಾಯವು, ಅತಿಶಯವುಳ್ಳ. ತರುಣೀ=ಯುವತಿಯ, ವೇಷಾ=ರೂಪಿನಂಥಾ ರೂಪವುಳ್ಳ, ಪ್ರಾವೃಟ್=ವರ್ಷಾಸಮಯವು, ಕಸ್ಯ=ಯಾವ ಪುರುಷನಿಗೆ, ಹರ್ಷಂ=ಸಂಭೋಗೌತ್ಸುಕ್ಯವನ್ನು, ನತನುತೇ=ಉಂಟುಮಾಡುವದಿಲ್ಲವು. .... ||೯೦||

ತಾ॥ ಕಾಮವಿಕಾರವನ್ನು ವೃದ್ಧಿಪಡಿಸುತ, ಅರಳಿದ ಜಾಜಿಹೂವುಗಳ ಸುವಾಸನೆಯಿಂದ ಶೋಭಿಸುತಲು, ದೃಢೋನ್ನತವಾದ ಪಯೋಧರ ಭಾರದಿಂದಸೆವುದರಿಂದಲೂ ತರುಣಿಯ ವೇಷದಂತಿರುವ ವೇಷವನಾಂತ ವರ್ಷಾಸಮಯವು ಲೋಕದೊಳು ವಿರಕ್ತಸಿಗೂ ಸಂಭೋಗೌತ್ಸುಕ್ಯವನ್ನುಂಟುಮಾಡುವದು. .... .... .... ||೯೦||

ಶ್ಲೋ॥ ವಿಯದುಪಚಿತಮೇಘಂ ಭೂಮಯಃಕಂದಳಿನ್ಯೋ ನವಕುಟಜಕ
ದಂಬಾಮೋದಿನೋಗಂಧವಾಹಾಃ ॥ ಶಿಖಿಕುಲಕಲಕೇಕಾರಾವರ
ಮ್ಯಾವನಾಂತಾಸ್ಸುಖಿನಮಸುಖಿನಂವಾಸರ್ವಮುತ್ಕಂಠಯಂತಿ ॥

ಟೀ॥ ಉಪಚಿತ=ವಿಶೇಷವಾದ, ಮೇಘಂ=ಮೇಘಗಳುಳ್ಳ, ವಿಯತ್=ಆಕಾಶವು, ಕಂದಳಿನ್ಯಃ=ಅಂಕುರಗಳುಳ್ಳ, ಭೂಮಯಃ=ನೆಲಗಳು, ನವ=ಹೊಸದಾದ, ಕುಟಜ=ಬೆಟ್ಟಮಲ್ಲಿಗೆಗಳ, ಕದಂಬ=ಸಮುದಾಯದ, (ಈಚಲು ಹೂವುಗಳ) ಆಮೋದಿನಃ=ಪರಿಮಳವುಳ್ಳ, ಗಂಧವಾಹಾಃ=ವಾಯುಗಳು, ಶಿಖಿ=ಮಯೂರಗಳ, ಕುಲ ಸಮುದಾಯದ, ಕೇಕಾರಾವ=ಕೇಕಾ ಎಂಬ ಧ್ವನಿಗಳಿಂದ, ರಮ್ಯಾಃ=ರಮಣೀಯಗಳಾದ, ವನಾಂತಾಃ=ವನ ಮಧ್ಯಪ್ರದೇಶಗಳು, ಸುಖಿನಂ=ಸುಖಿಯನ್ನಾಗಲಿ, ದುಃಖಿನಂವಾ=ದುಃಖಿಯನ್ನಾಗಲಿ, ಸರ್ವಂ=ಎಲ್ಲರನ್ನು, ಉತ್ಕಂಠಯಂತಿ=ಸುರತೌತ್ಸುಕ್ಯವುಳ್ಳವನನ್ನಾಗಿ ಮಾಡುವದು. .... ||೯೧||

ತಾ॥ ಸಮೃದ್ಧವಾದ ಮೇಘಗಳಿಂದ ಶೋಭಾಯಮಾನವಾದ ಅಂತರಿಕ್ಷವು; ಅಲ್ಲಲ್ಲಿ ಮೊಳತು, ಚಿಗುರಿ, ರಮಣೀಯಗಳಾದ ಭೂಭಾಗಗಳು, ಬೆಟ್ಟಮಲ್ಲಿಗೆ ಮೊದಲಾದ ಕುಸುಮಗಳ ಗಂಧದಿಂದಾನಂದಕರವಾದ ಮಂದಮಾರುತವು, ನವಿಲುಗಳ ಕೇಕಾ ಎಂಬ ನಿನಾದವು ಎಂಬಿವೆಲ್ಲವೂ ಈ,

ವರ್ಷಾಕಾಲದೊಳು ಸುಖಿಗೂ ದುಃಖಿಗೂ ಕೂಡ ಸಂಭೋಗೋತ್ಸುಕ್ಯವ ನ್ನುಂಟುಮಾಡುವುದು. ಎಂದರೆ ಆಷ್ಟು ಸೊಬಗಿನಿಂದ ಶೋಭಿಸುವದೆಂದಭಿಪ್ರಾಯವು ..... ..... ||೯೦||

ಶ್ಲೋ|| ಉಪರಿಘನಂಘನಪಟಲಂತಿರ್ಯಗ್ಗಿರಯೋಪಿನರ್ತಿತಮಯೂರಾಃ ।
ಕ್ಷಿತಿರಪಿಕಂದಳಧವಳಾದೃಷ್ಟಿಂಪಥಿಕಃಕ್ವಪಾತಯತಿ ||೯೧||

ಟೀ|| ಉಪರಿ=ಮೇಲೆ, ಘನಂ=ದಟ್ಟವಾದ, ಘನಪಟಲಂ=ಮೇಘಸಮುದಾಯವು, ತಿರ್ಯಕ್=ಪಕ್ಕದಲ್ಲಿ (ದಿಕ್ಕುಗಳಲ್ಲಿ) ನರ್ತಿತ=ನರ್ತನಮಾಡುತ್ತಿರುವ, ಮಯೂರಾಃ=ನವಿಲುಗಳುಳ್ಳ, ಗಿರಯೋಪಿ=ಪರ್ವತಗಳೂ, (ಸಂತಿ=ಇರುವವು) ಕ್ಷಿತಿರಪಿ=ಭೂಮಿಯೂ, ಕಂದಳಧವಳಾ=ಮೊಳಕೆಗಳಿಂದ ಸ್ವಚ್ಛವಾದದ್ದು. ಪಥಿಕಃ=ಮಾರ್ಗಸ್ಥನು, ದೃಷ್ಟಿಂ=ದೃಷ್ಟಿಯನ್ನು, ಕ್ವ=ಎಲ್ಲಿ, ಪಾತಯತಿ=ಇಡುವನು. ||೯೧||

ತಾ|| ಮೇಲೆ ನೋಡಿದರೆ ಮೇಘಗರ್ಜನೆ, ಮತ್ತು ಸುತ್ತಲಾದರೋ ಮನೋಹರವಾಗಿ ನರ್ತಿಸುತಲಿರುವ ಮಯೂರಗಳ ಕೇಕಾನಾದ, ಭೂಮಿಯಲ್ಲಿ ಎಲ್ಲಿ ನೋಡಿದಾಗ್ಯೂ ಪೈರುಗಳು ಮೊಳತು ಸ್ವಚ್ಛವಾಗಿರುವುದು. ಇಂತಪ್ಪ ವರ್ಷಾಕಾಲದೊಳು ಮಾರ್ಗಸ್ಥನಾದ ವಿರಹಿಗೆ ಎಲ್ಲಿ ನೋಡಿದರೂ ಕಾಮೋದ್ರೇಕವಾಗುವದರಿಂದ ಬಹಳ ಕಷ್ಟವಾಗಿರುವದು.

ಶ್ಲೋ|| ಇತೋವಿದ್ಯುದ್ವಲ್ಲೀವಿಲಸಿತಮಿತಃಕೇತಕಿತರೋಃ ಸ್ಫುರದ್ಗಂ
ಧಃಪ್ರೋದ್ಯಜ್ಜಲದನಿನದಸ್ಫೂರ್ಜಿತಮಿತಃ ॥ ಇತಃಕೇಕಿಕ್ರೀ
ಡಾಕಲಕಲರವಃ ಪಕ್ಷ್ಮಲದೃಶಾಂಕಥಂಯಾಸ್ಯಂತ್ಯೇತೇವಿರಹದಿ
ವಸಾಸ್ಸಂಭೃತರಸಾಃ ..... ..... ||೯೨||

ಟೀ|| ಇತಃ=ಈಭಾಗದಲ್ಲಿ, ವಿದ್ಯುದ್ವಲ್ಲೀವಿಲಸಿತಂ=ಲತೆಯಂತಿರುವ ಮಿಂಚಿನ ವಿಲಾಸ, ಇತಃ=ಮತ್ತೊಂದು ಭಾಗದಲ್ಲಿ, ಕೇತಕಿತರೋಃ=ಕೇದಿಗೆ ಗಿಡದ (ಹೂವಿನ) ಸ್ಫುರದ್=ಹೊಳೆವ, ಗಂಧಃ=ವಾಸನೆ, ಇತಃ=ಇನ್ನೊಂದು ಕಡೆಯಲ್ಲಿ, ಪ್ರೋದ್ಯತ್=ಪ್ರಚುರವಾದ, ಜಲದ=ಮೇಘಗಳ, ನಿನದ=ಧ್ವನಿಯು, ಸ್ಫೂರ್ಜಿತಂ=ವ್ಯಾಪನೆಯು, ಇತಃ=ಮತ್ತೊಂದು ಕಡೆಯಲ್ಲಿ, ಕೇಕಿ=ಮಯೂರಗಳ, ಕ್ರೀಡಾ=ಆಟದಿಂದುಂಟಾದ, ಕಲಕಲರವಃ=ಕೋಲಾಹಲ ಧ್ವನಿಯು, (ಲಸತಿ=ಪ್ರಕಾಶಿಸುವದು,) ಪಕ್ಷ್ಮಲದೃಶಾಂ=ಚಂಚಲಾಕ್ಷಿಯರಿಗೆ, ಸಂಭೃತರಸಾಃ=ತುಂಬಿರುವ ಶೃಂಗಾರಾದಿ ರಸಗಳುಳ್ಳ, ಏತೇ=ಈ, ವಿರಹದಿವಸಾಃ=ವಿಯೋಗದ ದಿವಸಗಳು, ಕಥಂ=ಹೇಗೆ, ಯಾಸ್ಯಂತಿ=ಕಳೆಯುವವು. .... .... ||೯೨||

ತಾ॥ ಲತೆಯಂತೆ ಲಲಿತವಾದ ಮಿಂಚಿನ ಹೊಳಪಿನಿಂದಲೂ, ಕೇತಕೀ ಕುಸುಮಗಳ ಸುವಾಸನೆಯಿಂದಲೂ, ಮೇಘನಾದದ ವಿಜೃಂಭಣೆಯಿಂದಲೂ, ಒಂದೆಡೆಯೊಳು ಮಯೂರಗಳ ಮನೋಹರವಾದ ಕಲಕಲಾ ರವಗಳಿಂದಲೂ, ಅಸಮಾನವಾಗಿ ಶೋಭಿಸುವ ಈ ವರ್ಷಾದಿವಸಗಳಲ್ಲಿ ವಿರಹಿಣಿಯರಾಗಿರುವ ಹರಿಣನಯನೆಯರಾದ ತರುಣಿಯರಿಗೆ ಕಾಲವನ್ನು ಕಳೆಯುವದು ಬಹು ದುರ್ಲಭವೆಂದಾಶಯವು. .... ॥೯೩॥

ಶ್ಲೋ॥ ಅಸೂಚೀಸಂಚಾರೇತಮಸಿನಭಸಿಪ್ರೌಢಜಲದಧ್ವನಿಪ್ರಾಜ್ಞಂಮ
ನ್ಯೇಪತತಿಪೃಷತಾನಾಂಚನಿಚಯೇ ॥ ಇದಂಸೌದಾಮಿನ್ಯಾಃಕನಕ
ಕಮನೀಯಂವಿಲಸಿತಂಮುದಂಚಮ್ಲಾನಿಂಚ ಪ್ರಥಯತಿಪಥಿಸ್ವೈ
ರಸುದೃಶಾಂ .... .... ॥೯೪॥

ಟೀ॥ ತಮಸಿ=ಅಂಧಕಾರವು, ಅಸೂಚೀಸಂಚಾರೇ ಸತಿ=ಸೂಜಿಯು ತೂರಲಿಕ್ಕಾಗದಿರುತ್ತಿರಲಾಗಿ, ನಭಸಿ=ಆಕಾಶವು, ಪ್ರೌಢ=ವಿಶಾಲವಾದ; ಜಲದ=ಮೇಘಗಳ, ಧ್ವನಿ=ಶಬ್ದದಿಂದ, ಪ್ರಾಜ್ಞಂಮನ್ಯೇ ಸತಿ=ವಾಚಾಲಕವಾದದ್ದಾಗಿ ತಿಳಿಯುತ್ತಿರಲು, ಪೃಷತಾನಾಂ=ಉದಕಬಿಂದುಗಳ, ನಿಚಯೇ=ಸಮುದಾಯವು, ಪತತಿ ಸತಿ=ಬೀಳುತ್ತಿರಲಾಗಿ, ಸೌದಾಮಿನ್ಯಾಃ=ಮಿಂಚಿನ, ಕನಕಕಮನೀಯಂ=ಸ್ವರ್ಣದಂತೆ ಸುಂದರವಾದ, ವಿಲಸಿತಂ=ವಿಲಾಸವು, ಸ್ವೈರಸುದೃಶಾಂ=ಅಭಿಸಾರಿಕೆಯರಾದ ಅಬಲೆಯರಿಗೆ, ಮುದಂಚ=ಸಂತೋಷವನ್ನು, ಮ್ಲಾನಿಂಚ=ವ್ಯಥೆಯನ್ನೂ, ಪ್ರಥಯತಿ=ಪ್ರಕಟಮಾಡುವದು. .... ॥೯೪॥

ತಾ॥ ಸೂಜಿ ಸುವೆಸುವಷ್ಟು ಅವಕಾಶವಿಲ್ಲದೆ ಗಾಢಾಂಧಕಾರವು ವ್ಯಾಪಿಸಿ ಮೇಘಗರ್ಜನೆಯಿಂದೊಡಗೂಡಿ ತುಂತುರು ಹನಿಯು ಬೀಳುತ್ತಿರುವ ವರ್ಷಾಕಾಲದ ರಾತ್ರಿಯೊಳು ಸ್ವಕಾಂತರನ್ನರಸುತ ಸಂಕೇತಸ್ಥಾನವನ್ನೈದುವ ಅಭಿಸಾರಿಕೆಯರಾದ ತರುಣಿಯರಿಗೆ ಮಿಂಚಿನ ಹೊಳಪು ಮಾರ್ಗವನ್ನು ತೋರಿಸುವದರಿಂದ ಆನಂದವನ್ನು, ಇತರರು ತಮ್ಮನ್ನು ಕಾಣುವರೆಂಬದಾಗಿ ವ್ಯಥೆಯನ್ನೂ ಉಂಟುಮಾಡುವದು. .... ॥೯೪॥

ಶ್ಲೋ॥ ಆಸಾರೇಣನಹರ್ಮ್ಯತಃಪ್ರಿಯತಮೈರ್ಯಾತುಂಬಹಿಶ್ಶಕ್ಯತೇಶೀತೋ
ತ್ಕಂಪನಿಮಿತ್ತಮಾಯತದೃಶಾಗಾಢಂಸಮಾಲಿಂಗ್ಯತೇ ॥ಜಾತಾಶ್ಶೀ
ಕರಶೀತಲಾಶ್ಚಮರುತೋ ರತ್ಯಂತಖೇದಚ್ಛಿದೋ ಧನ್ಯಾನಾಂ
ಬತದುರ್ದಿನಂಸುದಿನತಾಂಯಾತಿಪ್ರಿಯಾಸಂಗಮೇ ॥೯೫

ಟೀ॥ ಆಸಾರೇಣ=ಧಾರಾಸಂಪಾತದಿಂದ, ಬಹಿಃ=ಹೊರಗೆ, ಹರ್ಮ್ಯತಃ=ಉಪ್ಪರಿಗೆಯ ದೆಶೆಯಿಂದ, ಪ್ರಿಯತಮೈಃ=ವಲ್ಲಭರಿಂದ, ಯಾತುಂ=ಹೋಗುವುದಕ್ಕೆ, ನಶಕ್ಯತೇ=ಆಗುವದಿಲ್ಲ. ಶೀತ=ಛಳಿಯಿಂದುಂಟಾದ, ಉತ್ಕಂಪನಿಮಿತ್ತಂ=ನಡುಗುವದಕ್ಕಾಗಿ, ಆಯತದೃಶಾ=ವಿಶಾಲಾಕ್ಷಿಯಿಂದ, ಗಾಢಂ=ದೃಢವಾಗಿ, ಸಮಾಲಿಂಗ್ಯತೇ=ಆಲಿಂಗಿಸೋಣವಾಗುತ್ತದೆ, ಶೀಕರ=ತುಂತುರುಗಳಿಂದ, ಶೀತಲಾಃ=ತಣ್ಣಗಿರುವ, ಮರುತಃ=ವಾಯುಗಳು, ರತ್ಯಂತ=ಸಂಭೋಗಾವಸಾನದೊಳುಂಟಾದ, ಖೇದ=ಆಯಾಸವನ್ನು, ಛಿದಃ=ನಿವಾರಣಮಾಡತಕ್ಕಂಥವುಗಳು, ಜಾತಾಃ=ಆಗುವವು, ಧನ್ಯಾನಾಂ=ಸುಕೃತಿಗಳಿಗೆ, ಪ್ರಿಯಾಸಂಗಮೇ=ವಲ್ಲಭೆಯರ ಸಹವಾಸಕಾಲದೊಳು, ದುರ್ದಿನಂ=ದುರ್ದಿನವೂ, ಸುದಿನತಾಂ=ಒಳ್ಳೆಯದಿವಸದ ಭಾವವನ್ನು, ಯಾತಿ=ಹೊಂದುವುದು, ಬತ=ಆಶ್ಚರ್ಯವು, ॥೯೫॥

ತಾ॥ ಮೇಘಗಳಿಂದ ಆವೃತವಾಗಿ ತುಂತುರು ಹನಿಯು ಸುರಿಯುತ್ತಲಿರುವದರಿಂದ ಅಂತಃಪುರದೊಳಗಿರುವ ಪ್ರಿಯರು ಹೊರಗೆ ಹೊರಡಲಿಕ್ಕಾಗುವದಿಲ್ಲ. ಕೇವಲ ಛಳಿಯಿಂದ ಶರೀರವು ನಡುಗುವದಾದಕಾರಣ ಕಾಮಿನಿಯರು ಕಾಂತರನ್ನು ದೃಢವಾಗಿ ಆಲಿಂಗಿಸಿಕೊಂಬರು, ತಣ್ಣಗಿರುವ ಗಾಳಿಯು ಛಳಿಯ ರೂಪವಾಗಿದ್ದಾಗ್ಯೂ ಸಂಭೋಗಾವಸಾನದೊಳುಂಟಾದ ಆಯಾಸವನ್ನು ಪರಿಹರಿಸುವಂಥಾದ್ದಾಗುವದು. ಆದುದರಿಂದಲೇ ಸುಕೃತಿಗಳಾದ ಕಾಂತರಿಗೆ ಕಾಂತೆಯರ ಸಹವಾಸದೊಳು ಮೇಘಾವೃತವಾಗಿರುವ ದುರ್ದಿನವೂ ಆನುಕೂಲ್ಯವನ್ನುಂಟುಮಾಡುವದರಿಂದ ಸುದಿನವಾಗಿಯೇ ಪರಿಣಮಿಸುವದು. .... .... ॥೯೫॥

ಶ್ಲೋ॥ ಅರ್ಧಂಸುಪ್ತ್ವಾ ನಿಶಾಯಾಸ್ಸರಭಸಸುರತಾಯಾಸಸನ್ನಶ್ಲಥಾಂ
ಗಃಪ್ರೋದ್ಭೂತಾಸಹ್ಯತೃಷ್ಣೋ ಮಧುಮದನಿರತೋಹರ್ಮ್ಯಪೃ
ಷ್ಠೇವಿವಿಕ್ತೇ ॥ ಸಂಭೋಗಕ್ಲಾಂತಕಾಂತಾಶಿಥಿಲಭುಜಲತಾವ
ರ್ಜಿತಂಕರ್ಕರೀತೋ ಜ್ಯೋತ್ಸ್ನಾಭಿನ್ನಾಚ್ಛಧಾರಂನಪಿಬತಿಸ
ಲಿಲಂಶಾರದಂಮಂದಪುಣ್ಯಃ .... ॥೯೬॥

ಟೀ॥ ನಿಶಾಯಾಃ=ರಾತ್ರಿಯ, ಅರ್ಧಂ=ಅರ್ಧಭಾಗವನ್ನು, ಸುಪ್ತ್ವಾ=ಮಲಗಿದ್ದು, ಸರಭಸ=ಸಂಭ್ರಮದೊಡನೆ, ಸುರತ=ಸಂಭೋಗದ, ಆಯಾಸ=ಶ್ರಮದಿಂದ, ಸನ್ನ=ಚಲಿಸಿದ. ಶ್ಲಥ=ಶಿಥಿಲವಾದ, ಅಂಗಃ=ಅವಯವಗಳುಳ್ಳವನಾಗಿ, ಪ್ರೋದ್ಭೂತ=ಉಂಟಾದ. ಅಸಹ್ಯ=ಸಹಿಸಲಶಕ್ಯವಾದ. ತೃಷ್ಣಃ=ದಾಹವುಳ್ಳ, ಮಧು=ಸಹವಾಸಕ್ಕಾಗಿ ತಂಬೂಲ ಮೊದಲುಮಾಡಿದ ಮದ್ಯಪಾನದಿಂದುಂಟಾದ, ಮದ=ಮತ್ತ

ತ್ರೆಯಿಂದ, ನಿರತಃ=ಪರವಶವಾದವನಾಗಿ, ವಿವಿಕ್ತೇ=ರಹಸ್ಯವಾದ, ಹರ್ಮ್ಯಪೃಷ್ಠೇ=
ಉಪ್ಪರಿಗೆಯ ಮೇಲ್ಭಾಗದಲ್ಲಿ, ಕರ್ಕರೀತಃ=ಗಿಂಡಿಯದೆಸೆಯಿಂದ, ಸಂಭೋಗ=
ಸಹವಾಸದಿಂದ, ಕ್ಲಾಂತ=ಬಳಲಿದ, ಕಾಂತಾ=ವಲ್ಲಭೆಯರ, ಶಿಥಿಲ=ಶಿಥಿಲವಾದ,
ಭುಜಲತಾ=ಲತೆಯಂತಿರುವ ಭುಜದಿಂದ, ಆವರ್ಜಿತಂ=ಬೊಗ್ಗಿಸಲ್ಪಟ್ಟ, ಜ್ಯೋ
ತ್ಸ್ನಾ=ಬೆಳ್ದಿಂಗಳಿಂದ, ಭಿನ್ನ=ಕೂಡಿದ, ಅಚ್ಛ=ನಿರ್ಮಲವಾದ, ಧಾರಂ=ಧಾರೆ
ಯುಳ್ಳ [illegible] ಹೇಗೆ ಹಾಗೆ, ಶಾರದಂ=ಶರತ್ಕಾಲ ಸಂಬಂಧವಾದ, ಸಲಿಲಂ=
ಉದಕವನ್ನು, ಮಂದಪುಣ್ಯಾಃ=ನಿರ್ಭಾಗ್ಯರು, ನಹಿ ಪಿಬತಿ=ಪಾನಮಾಡುವದಿಲ್ಲವು ॥೯೬॥

ತಾ॥ ಶರತ್ಕಾಲದೊಳರ್ಧರಾತ್ರಿ ಪರ್ಯಂತವೂ ಸುಖಶಯನವಂ ಮಾ
ಡಿ, ತರುವಾಯ ಮಧುರಸ ಪಾನದಿಂದ ಮತ್ತನಾಗಿ, ಸಹವಾಸದಿಂದುಂಟಾದ
ಆಯಾಸದಿಂದ ಬಳಲಿದ ಅವಯವಗಳಿಂದೊಡಗೂಡಿ, ಬಳಿಕ ದಾಹಗೊಂಡು,
ಮೇಲುಪ್ಪರಿಗೆಯೊಳು ರಹಸ್ಯಸ್ಥಾನದಲ್ಲಿ ಸಹವಾಸದಿಂದಾಯಾಸಹೊಂದಿದ
ಕಾಂತೆಯು ಕಮನೀಯವಾದ ಬಾಹುಲತೆಯಿಂದ ಬೊಗ್ಗಿಸಲ್ಪಟ್ಟ ಗಿಂಡಿ
ಯಿಂದ ಧಾರಾರೂಪವಾಗಿ ಬರುವ ಆನಂದಕರವಾದ ಹಂಸೋದಕವನ್ನು
ಸುಕೃತಿಯು ಪಾನಮಾಡುವನಲ್ಲದೆ ನಿರ್ಭಾಗ್ಯನಿಗೆ ದೊರೆಯಲಾರದು
(ಪ್ರಾತಃಕಾಲದೊಳು ಬೆಂಕಿಯಿಂದ ಕಾದು, ಬಳಿಕ ಬಿಸಿಲಿನೊಳಿದ್ದು ತರು
ವಾಯ ಆದಿನರಾತ್ರಿ ಬೆಳ್ದಿಂಗಳೊಳಗಿದ್ದ ಉದಕವು ಹಂಸೋದಕವೆನ್ನಲ್ಪ
ಡುವದು ; ಇದು ದೇಹಕ್ಕೆ ಅತ್ಯಾರೋಗ್ಯವೆಂದು ಹೇಳುವರು.) ॥೯೭॥

ಶ್ಲೋ॥ ಹೇಮಂತೇ ದಧಿದುಗ್ಧಸರ್ಪಿರಶನಾ ಮಾಂಜಿಷ್ಠವಾಸೋಭೃತಃ ಕಾ
ಶ್ಮೀರದ್ರವಸಾಂದ್ರದಿಗ್ಧವಪುಷಃ ಖಿನ್ನಾ ವಿಚಿತ್ರೈ ರತೈಃ ॥ ವೃ
ತ್ತೋರುಸ್ತನಕಾಮಿನೀಜನಕೃತಾಶ್ಲೇಷಾ ಗೃಹಾಭ್ಯಂತರೇ ತಾಂ
ಬೂಲೀದಳಪೂಗಪೂರಿತಮುಖಾ ಧನ್ಯಾಸ್ಸುಖಂ ಶೇರತೇ ॥೯೮॥

ಟೀ॥ ಹೇಮಂತೇ=ಹಿಮಂತಋತುವಿನಲ್ಲಿ, ದಧಿ=ಮೊಸರು, ದುಗ್ಧ=ಹಾಲು
ಸರ್ಪಿಃ=ತುಪ್ಪವು ಇವುಗಳೆ, ಅಶನಾಃ=ಆಹಾರವಾಗಿಯುಳ್ಳ, ಮಾಂಜಿಷ್ಠವಾಸಃ=
ಕೆಂಪು ವಸ್ತ್ರಗಳನ್ನು, (ಶಕಲಾತಿ ಮೊದಲಾದವುಗಳನ್ನು) ಭೃತಃ=ಧರಿಸಿದವರಾಗಿ
ಕಾಶ್ಮೀರ=ಪರಿಮಳದ್ರವ್ಯದ, ದ್ರವ=ದ್ರವದಿಂದ, ದಿಗ್ಧ=ತೊಡೆಯಲ್ಪಟ್ಟ, ವಪುಷಃ
ಶರೀರವುಳ್ಳ, ವಿಚಿತ್ರೈಃ=ನಾನಾವಿಧವಾದ, ರತೈಃ=ಸಹವಾಸಗಳಿಂದ, ಖಿನ್ನಾಃ
ಶ್ರಾಂತರಾಗಿ, ವೃತ್ತ=ಗುಂಡಾದ, ಉರು=ದಪ್ಪವಾದ, ಸ್ತನ=ಕುಚಗಳುಳ್ಳ,
ಮಿನೀಜನ=ಅಂಗನಾಜನರಿಂದ, ಕೃತ=ಮಾಡಲ್ಪಟ್ಟ. ಆಶ್ಲೇಷಾಃ=ಆಲಿಂಗನಗಳ
ತಾಂಬೂಲೀದಳ=ವೀಳೆಯದೆಲೆಗಳು, ಪೂಗ=ಅಡಿಕೆಯು, ಇವುಗಳಿಂದ, ಪೂರಿತ=

ಬಿದ, ಮುಖಾಃ=ವದನಗಳುಳ್ಳವರಾಗಿಯೂ, ಧನ್ಯಾಃ=ಸುಕೃತಿಗಳು, ಗೃಹಾಭ್ಯಂತರೆ=ಚಿಕ್ಕಮನೆಯಲ್ಲಿ, ಸುಖಂ=ಆನಂದವಾಗಿ, ಶೇರತೇ=ಮಲಗಿಕೊಳ್ಳುವರು, ||೯೭||

ತಾ|| ಹಾಲು ಮೊಸರು ತುಪ್ಪ ಮೊದಲಾದ ಉತ್ತಮಾಹಾರವನ್ನು ಸೇವಿಸುತ ದಿವ್ಯವಾಗಿರುವ ಕಾಶ್ಮೀರ ಪರಿಮಳ ಲೇಪನಮಂಗೈದು, ಶ್ಲಾಘ್ಯವಾದ ಪೂಗೀಫಲ ತಾಂಬೂಲಗಳಿಂದ ಶೋಭಾಯಮಾನವಾದ ಮುಖವುಳ್ಳವರಾಗಿ ದಿವ್ಯವಾದ ಸಕಲಾತಿ ಮೊದಲಾದ ವಸ್ತ್ರಗಳನ್ನು ಹೊದೆದು ಬಗೆಬಗೆಯಾದ ಸಂಭೋಗಗಳಿಂದ ಶ್ರಾಂತರಾಗುತ, ತೋರವಾಗಿಯೂ ಮತ್ತು ದುಂಡಾಗಿಯೂ ಬಲಿತೂ ಇರುವ ಉರೋಜಗಳಿಂದ ಅಸಮಾನವಾದ ಕಾಂತಿಯುಳ್ಳ ಕಾಮಿನಿಯರಿಂದಾಲಿಂಗಿತರಾಗಿ ಈ ಹಿಮಋತು ಸಮಯದೊಳು ಒಳಮನೆಗಳಲ್ಲಿ ಬೆಚ್ಚಗೆ ಮಲಗಿ ಸುಕೃತಿಗಳಾದವರು ಸುಖನಿದ್ರೆಯಂ ಗೈಯ್ಯುವರು. .... ||೯೭||

ಶ್ಲೋ|| ಪ್ರೋದ್ಯತ್ಪ್ರೌಢಪ್ರಿಯಂಗುದ್ಯುತಿಭೃತಿವಿಕಸತ್ಕುಂದಮಾದ್ಯದ್ದ್ವಿ
ರೇಫೇಕಾಲೇಪ್ರಾಲೇಯವಾತಪ್ರಚಲವಿಲಸಿತೋದಾರಮಂದಾರ
ಧಾಮ್ನಿ || ಯೇಷಾಂನೋಕಂಠಲಗ್ನಾಕ್ಷಣಮಪಿತುಹಿನಕ್ಷೋದ
ದಕ್ಷಾಮೃಗಾಕ್ಷೀತೇಷಾಮಾಯಾಮಯಾಮಾಯಮಸದನಸಮಾ
ಯಾಮಿನೀಯಾತಿಯೂನಾಂ .... .... ||೯೮||

ಟೀ|| ಪ್ರೋದ್ಯತ್=ಪ್ರಾದುರ್ಭವಿಸಿದ, ಪ್ರೌಢ=ದೃಢವಾದ, ಪ್ರಿಯಂಗು=ಪ್ರಿಯಂಗು ಧಾನ್ಯಗಳ (ನವಣೆಗಳ) ದ್ಯುತಿ=ಕಾಂತಿಯನ್ನು, ಭೃತಿ=ಧರಿಸಿರುವ, ವಿಕಸತ್=ಅರಳಿದ, ಕುಂದ=ಮಲ್ಲಿಕಾ ಕುಸುಮಗಳಿಂದ, ಮಾದ್ಯತ್=ಮದಿಸಿದ, ದ್ವಿರೇಫ=ಭ್ರಮರಗಳುಳ್ಳ, ಪ್ರಾಲೇಯ=ಮಂಜಿನಿಂದ ಕೂಡಿದ, ವಾತ=ವಾಯುವಿನ, ಪ್ರಚಲ=ಚಲನದಿಂದ, ವಿಲಸಿತ=ಪ್ರಕಾಶಮಾನವಾದ, ಉದಾರ=ಗಂಭೀರವಾದ, ಮಂದಾರ=ಮಂದಾರ ಕುಸುಮಗಳಿಗೆ, ಧಾಮ್ನಿ=ಆಧಾರವಾದ, ಕಾಲೇ=ಹೇಮಂತ ಸಮಯದಲ್ಲಿ, ಯೇಷಾಂ=ಯಾವಪುರುಷರಿಗೆ, ತುಹಿನಕ್ಷೋದ=ಶೀತನಿವಾರಣೆಯಲ್ಲಿ, ದಕ್ಷಾ=ಸಮರ್ಥಳಾದ, ಮೃಗಾಕ್ಷೀ=ತರುಣಿಯು, ಕ್ಷಣಮಪಿ=ಕ್ಷಣಕಾಲವಾದರೂ, ಕಂಠ=ಕೊರಳಿನಲ್ಲಿ, ಲಗ್ನಾ=ಸಂಬಂಧಿಸಿರುವಳು, ನೋ=ಆಗುವದಿಲ್ಲವೋ, ತೇಷಾಂ=ಅಂಥ, ಯೂನಾಂ=ತರುಣರಿಗೆ, ಆಯಾಮ=ನೀಳವಾದ, ಯಾಮಾ=ಜಾಮವುಳ್ಳ, ಯಾಮಿನೀ=ರಾತ್ರಿಯು, ಯಮಸದನ=ಯಮನ ಲೋಕದಂತೆ, ಸಮಾ=ಸಮಾನವಾಗಿ, ಯಾತಿ=ಕಳೆಯುವದು. ... ||೯೮||

ತಾ॥ ಪ್ರಿಯಂಗುವೆಂಬ ಧಾನ್ಯದಂತೆ (ನವಣೆಯಂತೆ) ಕಾಂತಿಯುಳ್ಳದ್ದಾಗಿ, ಅರಳಿದ ಕುಂದಮಂದಾರಾದಿ ಕುಸುಮರಸಾಸ್ವಾದನದಿಂದ ಮದಿಸಿರುವ ದುಂಬಿಗಳ ಝೇಂಕಾರದಿಂದೊಡಗೂಡಿ, ಹಿಮದಿಂದ ಶೀತಲವಾಗಿರುವ ವಾಯುವಿನಿಂದ ವಿಕಸಿತವಾದ ಕುಸುಮಗಳಿಗೆ ಆಕರವಾಗಿರುವ ಸರ್ವೋತ್ತಮವಾದ ಹೇಮಂತ ಸಮಯದೊಳು ದೃಢವಾಗಿ ಕಂಠಾಲಿಂಗನಮಂಗೈದು ಕುಚಕುಂಭಗಳೊಳು ಅವಿತುಕೊಂಡಿರುವ ಉಷ್ಣದಿಂದ ಶೀತವನ್ನು ಧ್ವಂಸಮಾಡುವ ಕಾಮಿನಿಯು ಕಂಠಾಲಿಂಗನವೆಂಬದು ಯಾವ ತರುಣನಿಗಾದರೆ ಕ್ಷಣಕಾಲವಾದರೂ ಇರುವದಿಲ್ಲವೋ! ಅಂತವನಿಗೆ ಆ ರಾತ್ರಿಯೊಳು ಕಾಲವನ್ನು ಕಳೆಯುವದು ಯಮಲೋಕದೊಳು ನರಕಯಾತನೆಯನ್ನನುಭವಿಸುವರಿಗೆ ಕ್ಷಣಕಾಲವನ್ನು ಕಳೆಯುವದೆಂತು ಕಷ್ಟವೋ ಅದಕ್ಕಿಂತಅತಿಶಯವಾಗಿ ತೊಂದರೆಯಾಗುವದೆಂದಾಶಯವು. ॥೯೮॥

ಶ್ಲೋ॥ ಚುಂಬಂತೋಗಂಡಭಿತ್ತೀರಲಕವತಿಮುಖೇಸೀತ್ಕೃತಾನ್ಯಾದಧಾ
ನಾವಕ್ಷಸ್ಸೂತ್ಕಂಚುಕೇಷು ಸ್ತನಭರಪುಲಕೋದ್ಭೇದಮಾಪಾದ
ಯಂತಃ ॥ ಊರೂನಾಕಂಪಯಂತಃಪೃಥುಜಘನತಟಾತ್ಸ್ರಂಸ
ಯಂತೋಂಶುಕಾನಿವ್ಯಕ್ತಂಕಾಂತಾಜನಾನಾಂವಿಟಚರಿತಭೃತಶ್ಶೈ
ಶಿರಾವಾಂತಿವಾತಾಃ .... .... ॥೯೯॥

ಟೀ॥ ಗಂಡಭಿತ್ತೀಃ=ಗೋಡೆಗಳಂತಿರುವ ಕಪೋಲಗಳನ್ನು, ಚುಂಬಂತಃ=ಚುಂಬಿಸುವಂಥ, ಅಲಕವತಿ-ಮುಂಗುರುಳುಗಳುಳ್ಳ, ಮುಖೇ=ವದನದಲ್ಲಿ, ಸೀತ್ಕೃತಾನಿ=ಸೀತ್ಕಾರಗಳನ್ನು, ಆದಧಾನಾ=ಉಂಟುಮಾಡುವ, ವಕ್ಷಸ್ಸು=ವಕ್ಷಸ್ಥಲಗಳು, ಉತ್ಕಂಚುಕೇಷು=ಕಟ್ಟಲ್ಪಟ್ಟ ಕುಪ್ಪುಸಗಳುಳ್ಳವುಗಳಾದರು, ಸ್ತನಭರ=ಕುಚಭಾರಗಳಲ್ಲಿ, ಪುಲಕೋದ್ಭೇದಂ=ರೋಮಾಂಚವನ್ನು, ಆಪಾದಯಂತಃ=ಉಂಟುಮಾಡುತಲಿರುವ, ಊರೂನ್=ತೊಡೆಗಳನ್ನು, ಆಕಂಪಯಂತಃ=ನಡುಗಿಸುತಲಿರುವ, ಪೃಥು=ದೊಡ್ಡದಾದ, ಜಘನ=ಕಟಿಪಶ್ಚಾದ್ಭಾಗದ, ತಟಾತ್=ಪ್ರದೇಶದದೆಸೆಯಿಂದ, ಅಂಶುಕಾನಿ=ವಸ್ತ್ರಗಳನ್ನು, ಸ್ರಂಸಯಂತಃ=ಜಾರಿಸುವ, ಕಾಂತಾಜನಾನಾಂ=ಅಂಗನಾಜನರೊಳಗೆ, ವ್ಯಕ್ತಂ=ಸ್ಫುಟವಾಗಿ, ವಿಟ=ಕಾಮುಕರ, ಚರಿತ=ನಡತೆಯನ್ನು, ಭೃತಃ=ಧರಿಸಿರುವ, ಶೈಶಿರಾಃ=ಶಿಶಿರರುತು ಸಂಬಂಧವಾದ, ವಾತಾಃ=ವಾಯುಗಳು, ವಾಂತಿ=ಬೀಸುತ್ತವೆ. ... ॥೯೯॥

ತಾ॥ ಪಿಸುಂದನಾದ ಕಪೋಲಗಳನ್ನು ಚುಂಬಿಸುತ, ಮುಂಗುರುಳುಗಳುಳ್ಳ ಮುದ್ದುಮುಖದೊಳು ಸೀತ್ಕಾರವನ್ನುಂಟುಮಾಡುತ, ಕುಚಕುಚ

ಗಳು ಕುಪ್ಪಸಗಳಿಂದ ಕಟ್ಟಲ್ಪಟ್ಟವುಗಳಾಗಿದ್ದರೂ ಅವುಗಳಲ್ಲಿಯೂ ರೋಮಾಂಚವನ್ನುಂಟುಮಾಡುತ, ತೊಡೆಗಳನ್ನು ನಡುಗಿಸುತ್ತ,ಗಂಭೀರವಾದ ಕಟಿಪ್ರದೇಶದೊಳಿರುವ ವಸನವ ಸೆಳೆಯುತ್ತಲೂ ಈ ಮೇರೆಗೆಲ್ಲ ಕಾಮಿನಿಯರೊಳು ಕಾಮುಕರ ಚೇಷ್ಟೆಯನ್ನಾಚರಿಸುತ್ತಿರುವ ಶಿಶಿರ ಋತುವಿನ ಮನೋಹರವಾದ ವಾಯುಗಳು ಬೀಸುತ್ತಲಿರುವವು. ॥೯೯॥

ಶ್ಲೋ॥ ಕೇಶಾನಾಕುಲಯನ್ದೃಶೋ ಮುಕುಲಯನ್ವಾಸೋ ಬಲಾದಾಕ್ಷಿಪ
ನ್ನಾತನ್ವನ್ಪುಲಕೋದ್ಗಮಂ ಪ್ರಕಟಯನ್ನಾವೇಗಕಂಪಂ ಶನೈಃ ॥
ವಾರಂವಾರಮುದಾರಸೀತ್ಕೃತಕೃತೋ ದಂತಚ್ಛದಾನ್ಪೀಡಯನ್
ಪ್ರಾಯಃ ಶೈಶಿರ ಏಷ ಸಂಪ್ರತಿ ಮರುತ್ಕಾಂತಾಸು ಕಾಂತಾಯತೇ॥೧೦೦॥

ಟೀ॥ ಕೇಶಾನ್=ಕೂದಲುಗಳನ್ನು, ಆಕುಲಯನ್=ವ್ಯಾಕುಲಪಡಿಸುವದಾಗಿ, ದೃಶಃ=ದೃಷ್ಟಿಗಳನ್ನು, ಮುಕುಲಯನ್=ಮುಚ್ಚಿಸುವದಾಗಿ, ವಾಸಃ=ವಸ್ತ್ರವನ್ನು, ಬಲಾತ್=ಬಲಾತ್ಕಾರದಡೆಸೆಯಿಂದ, ಆಕ್ಷಿಪನ್=ಹಾರಿಸುವದಾಗಿ, ಪುಲಕೋದ್ಗಮಂ=ರೋಮಾಂಚವನ್ನು, ಆತನ್ವನ್=ಉಂಟುಮಾಡುವದಾಗಿ, ಆವೇಗ=ಭಯದಿಂದ, (ಅತಿಜಾಗ್ರತೆಯಿಂದ) ಕಂಪಂ=ನಡುಗುವಿಕೆಯನ್ನು, ಶನೈಃ=ಮೆಲ್ಲಗೆ, ಪ್ರಕಟಯನ್=ಉಂಟುಮಾಡುವದಾಗಿ, ವಾರಂವಾರಂ=ಪದೇಪದೇ, ಉದಾರ=ಗಂಭೀರವಾದ, ಸೀತ್ಕೃತ=ಸೀತ್ಕಾರವನ್ನು, ಕೃತಃ=ಮಾಡಿಸುವಂಥಾದ್ದಾಗಿ, ದಂತಚ್ಛದಾನ್=ತುಟಿಗಳನ್ನು, ಪೀಡಯನ್=ಬಾಧಿಸುವದಾಗಿಯೂ, ಏಷಃ=ಈ, ಶೈಶಿರಃ=ಶಿಶಿರಗಾತ್ರ ಸಂಬಂಧವಾದ, ಮರುತ್=ಗಾಳಿಯು, ಕಾಂತಾಸು=ಅಂಗನೆಯರಲ್ಲಿ, ಪ್ರಾಯಃ=ಬಹುಶಃ, ಕಾಂತಾಯತೇ=ವಲ್ಲಭನಂತಾಚರಿವುದು, ... ॥೧೦೦॥

ತಾ॥ ಕಾಂತೆಯರ ಕಮನೀಯವಾದ ಮುಂಗುರುಳುಗಳನ್ನು ಕೆದರುತ, ಕಣ್ಣುಗಳನ್ನು ಮುಚ್ಚಿಸುತ, ಉಟ್ಟಿರುವ ವಸ್ತ್ರವನ್ನು ಬಲಾತ್ಕಾರದಿಂದ ಸೆಳೆದು ಹಾರಿಸುತ, ರೋಮಾಂಚವನ್ನುಂಟುಮಾಡುತ, ಹಾಗೆಯೇ ದೇಹದೊಳು ಕಂಪನವನ್ನುಂಟುಮಾಡಿ, ಪದೇಪದೆ ಶ್ಲಾಘ್ಯವಾದ ಸೀತ್ಕಾರಾವಿರ್ಭಾವವನ್ನುಂಟುಮಾಡುತ್ತ, ಓಷ್ಠಪುಟಗಳನ್ನು ಪೀಡಿಸುತಲೂ ಇರುವದರಿಂದಲೇ ಈ ಶಿಶಿರ ಋತುವಿನ ಮಾರುತವು ಕಾಮಿನಿಯರೊಳು ಕಾಮುಚೇಷ್ಟೆಯನ್ನು ಮಾಡುವ ಕಾಂತನಂತಿರುವುದೆಂದಾಶಯವು. ಉಪಮೋತ್ಪ್ರೇಕ್ಷಾಲಂಕಾರಗಳು ಸಂಕರವಾಗಿರುವವು. .... ॥೧೦೦॥

ಶೃಂಗಾರ ಶತಕವು ಸಮಾಪ್ತವಾದುದು.



ಈ ಗ್ರಂಥ ಮುದ್ರಣದ ಸರ್ವಾಧಿಕಾರವು,
ಶ್ರೀ ಚಾಂಡೇಶ್ವರೀ ಬುಕ್ಕುಡಿಪೋ ಪ್ರೊಪ್ರೈಟರ್
M. ಮುನಿನಾಗಪ್ಪನವರದಾಗಿದೆ.

